# ಅನುಕ್ರಮಣಿಕೆ


ಪುಟ

೧ನೇ ಪ್ರಕರಣ:— ಕರ್ನಾಟಕದ ಇತಿಹಾಸದ ಆಧಾರಗಳೂ ವಿಭಾಗಗಳೂ . . . . . . . . . . . ೧

೨ನೇ " ಕರ್ನಾಟಕದ ಸ್ವಾಭಾವಿಕ ಸ್ವರೂಪ, ಹುಟ್ಟುವಳಿ ೬

೩ನೇ " ಜನರು, ಧರ್ಮ, ಉದ್ಯೋಗ, ಭಾಷೆ . . . ೧೦

೪ನೇ " ಕರ್ನಾಟಕದ ರಾಜಕೀಯ ವಿಭಾಗಗಳು ಹಾಗೂ ರಾಜ್ಯಪದ್ಧತಿ. . . . . . . . . . ೧೬

೫ನೇ " ಆಂಧ್ರಭೃತ್ಯರೂ ಚಾಲುಕ್ಯರೂ . . . . . ೨೫

೬ನೇ " ರಾಷ್ಟ್ರಕೂಟರು . . . . . . . . ೩೦

೭ನೇ " ಪಶ್ಚಿಮದ ಚಾಲುಕ್ಯರು . . . . . . . ೩೨

೮ನೇ " ಚಾಲುಕ್ಯರ ಕಾಲದ ರಾಜ್ಯವ್ಯವಸ್ಥೆ, ಧರ್ಮ, ನಡಾವಳಿ . . . . . . . . . . ೪೩

೯ನೇ " ವಿಜಯನಗರದ ಸಾಮ್ರಾಜ್ಯವು . . . . . ೪೯

೧೦ನೇ " ಮುಸಲ್ಮಾನರು, ಮಹಾರಾಷ್ಟ್ರರು, ಮೈಸೂರು ಸಂಸ್ಥಾನ . . . . . . . . . . ೬೬

೧೧ನೇ " ಮಹಾರಾಷ್ಟ್ರರು, ಹೈದರ, ಟೀಪು, ಇಂಗ್ಲಿಷರು . ೭೭

೧೨ನೇ " ಇಂಗ್ಲಿಷರ ಸುರಾಜ್ಯವು . . . . . . . ೯೨

ವಂಶಾವಳಿಗಳು . . . . . . . . . . . . . ೧೦೧




# ಕರ್ನಾಟಕದ ಇತಿಹಾಸವು

## ೧ನೇ ಪ್ರಕರಣ.

### ಕರ್ನಾಟಕ ಇತಿಹಾಸದ ಆಧಾರಗಳೂ ವಿಭಾಗಗಳೂ.

ಕನ್ನಡ ನುಡಿಯು ನಡೆಯುವ ನಾಡಿಗೆ ಕನ್ನಡ ನಾಡು ಇಲ್ಲವೆ ಕರ್ನಾಟಕ ಎಂಬ ಹೆಸರು. ಈ ದೇಶದ ಉತ್ತರಮೇರೆ ಕೊಲ್ಲಾಪುರದಿಂದ ಜತ್ತಿ-ಅಂಕಲ ಕೋಟೆ-ಕಲ್ಯಾಣಪಟ್ಟಣಗಳ ಮೇಲಿಂದ ಬೇದರದ ವರೆಗೆ ಹೋಗಿದೆ. ಪೂರ್ವಮೇರೆ ಬೇದರದಿಂದ ರಾಯಚೂರು-ದವಾನಿ-ತಾಡಪತ್ರಿ-ಬೆಂಗಳೂರುಗಳ ಮೇಲಿಂದ ನೀಲಗಿರಿಯ ತನಕ; ದಕ್ಷಿಣದ ಮೇರೆ ನೀಲಗಿರಿಯೇ; ನೀಲಗಿರಿಯಿಂದ ಮಲಿಯಾಳದ ದಂಡೇ ಹಿಡಿದು ಸದಾಶಿವಗಡದ ತನಕ ಹೋಗಿ, ಮುಂದೆ ಗೋವಾಂತಕದ ಸೀಮೆಯನ್ನು ಪಡಗಡೆಗೆ ಬಿಟ್ಟು, ಕೊಲ್ಲಾಪುರದ ವರೆಗೆ ಸಹ್ಯಾದ್ರಿಯೇ ಪಶ್ಚಿಮಮೇರೆಯಾಗಿರುವದು.

**ಕರ್ನಾಟಕ.**

ಕರ್ನಾಟಕದ ದಕ್ಷಿಣೋತ್ತರ ಉದ್ದಳತೆ ಹೆಚ್ಚುಕಡಿಮೆ ೪೫೦ ಮೈಲು, ಪೂರ್ವ ಪಶ್ಚಿಮ ಅಗಲು ೩೨೫ ಮೈಲು, ಕ್ಷೇತ್ರಫಲ ಸುಮಾರು ೧,೧೦,೦೦೦ ಚಚ್ಚೌಕುಮೈಲು, ಜನಸಂಖ್ಯೆ ಸುಮಾರು ೧⅔ ಕೋಟಿ ಉಂಟು. ಈ ಸೀಮೆಯು ದಕ್ಷಿಣಹಿಂದುಸ್ತಾನದ ನಡುವೆ ಇರುವದು. ತುಂಗಭದ್ರೆಯ ಉತ್ತರಕ್ಕಿರುವ ಕರ್ನಾಟಕದ ಭಾಗಕ್ಕೆ ಉತ್ತರಕರ್ನಾಟಕವೆಂಬ ಹೆಸರು; ಇದರಲ್ಲಿ ಮುಂಬಯಿ ಇಲಾಖೆ ಸೇರಿದ ಭಾಗಕ್ಕೆ ಮುಂಬಯಿಕರ್ನಾಟಕವೆಂಬ ಹೆಸರು. ತುಂಗಭದ್ರೆಯ ದಕ್ಷಿಣಕ್ಕಿರುವ ಭಾಗಕ್ಕೆ ದಕ್ಷಿಣಕರ್ನಾಟಕವೆನ್ನುವರು. ಈಗಿನ ಕರ್ನಾಟಕದಲ್ಲಿ ಮೂರು ಸರಕಾರಗಳ ಅಮಲು ನಡೆಯುವದು. (೧) ಉತ್ತರ ಕರ್ನಾಟಕದ ಪಶ್ಚಿಮಭಾಗ, ನೀಲಗಿರಿಯ ಸೀಮೆ, ಪೆನ್ನಾರ ತುಂಗಭದ್ರಾಗಳ ನಡುವಿನ ನಾಡು ಇವೆಲ್ಲ ಇಂಗ್ಲಿಷರ ರಾಜ್ಯಕ್ಕೆ ಸೇರಿರುತ್ತವೆ.

**ಕ್ಷೇತ್ರ ಮತ್ತು ಭಾಗಗಳು.**

(೨) ಉತ್ತರಕರ್ನಾಟಕದ ಪೂರ್ವಭಾಗವು ಹೈದರಾಬಾದದ ನಿಜಾಮನ ರಾಜ್ಯದಲ್ಲಿರುವದು. (೩) ದಕ್ಷಿಣಕರ್ನಾಟಕದ ಉಳಿದ ಭಾಗವು ಮೈಸೂರು ಸಂಸ್ಥಾನವು. ನಿಜಾಮನೂ ಮೈಸೂರ ಮಹಾರಾಜನೂ ಇಂಗ್ಲಿಷರ ಮಾಂಡಲಿಕರಿರುವರು.

ಬಹಳ ವರುಷಗಳ ಹಿಂದೆ ಕನ್ನಡಿಗರು ಸದ್ಯಕ್ಕಿಂತ ಹೆಚ್ಚು ವಿಸ್ತಾರವಾದ ನಾಡಿನಲ್ಲಿ ಹಬ್ಬಿದ್ದರು. ಒಂದು ಕಾಲದಲ್ಲಿ ಕನ್ನಡ ನುಡಿಯು **ಗೋದಾವರೀ** ನದಿಯಿಂದ **ಕಾವೇರೀ**ನದಿಯ ವರೆಗೂ **ಅರಬೀಸಮುದ್ರ**ದಿಂದ **ಪೂರ್ವಘಟ್ಟಗಳ** ವರೆಗೂ ನಡೆಯುತ್ತಿತ್ತೆಂದು ವಿದ್ವಾಂಸರು ಗೊತ್ತುಹಚ್ಚಿರುವರು. ಆ ಕಾಲದ ಕರ್ನಾಟಕದ ಮೇರೆಯನ್ನು ನಿಶ್ಚಯವಾಗಿ ವರ್ಣಿಸುವದಕ್ಕೆ ಬರುವದಿಲ್ಲ. ಯಾಕೆಂದರೆ, ಈಗಿನ ಕರ್ನಾಟಕದ ಕಡೆಸೀಮೆಗಳಲ್ಲಿ ಪೂರ್ವಕ್ಕೆ ನಿಜಾಮನ ರಾಜ್ಯದಲ್ಲಿಯೂ ಮದ್ರಾಸ ಇಲಾಖೆಯಲ್ಲಿಯೂ ತೆಲಗು ಹಿಂದುಸ್ತಾನೀ ನುಡಿಗಳೂ, ದಕ್ಷಿಣದಲ್ಲಿ ತಮಿಳುಮಾತೂ, ಪಶ್ಚಿಮೋತ್ತರಗಳಲ್ಲಿ ಮಹಾರಾಷ್ಟ್ರಭಾಷೆಯೂ ನಡೆಯುವಂತೆ ಪ್ರಾಚೀನ ಕಾಲದಲ್ಲಿಯೂ ಕರ್ನಾಟಕದ ಮೇರೆಯ ನಾಡುಗಳಲ್ಲಿ ಬೇರೆ ಬೇರೆ ಭಾಷೆಗಳು ರೂಢಿಯಲ್ಲಿದ್ದವೆಂದು ಗೊತ್ತಾಗಿದೆ. ದಕ್ಷಿಣದ ತೆಲಗರೂ ತಮಿಳರೂ ಉತ್ತರದ ಮಹಾರಾಷ್ಟ್ರರೂ ಕನ್ನಡ ನಾಡನ್ನು ಒಳಗುಗ್ಗಿ ಪ್ರಾಚೀನ ಕರ್ನಾಟಕದ ವಿಸ್ತಾರವನ್ನು ಕಡಿಮೆ ಮಾಡಿರುವರು.

**ಪ್ರಾಚೀನ ಕರ್ನಾಟಕ.**

ಕೃಷ್ಣಾ ತುಂಗಭದ್ರೆಗಳ ನಡುವೆ ಇರುವ ನಾಡು ಒಂದು ಸಾವಿರ ವರುಷಗಳ ಹಿಂದೆ ತಿರುಳುಕನ್ನಡದ ಸೀಮೆಯಾಗಿತ್ತು. ೯ನೆಯ ಶತಮಾನದ ನಡುವೆ ಬಾಳಿದ ನೃಪತುಂಗನೆಂಬ ಕನ್ನಡ ಕವಿಯು ಕಿಸುವೊಳಲು, ಕೊಣಪನಗರ, ಪುರಿಗೆರೆ, ಒಂಕುಂದ ಈ ಪಟ್ಟಣಗಳ ನಡುವಿನ ನಾಡು ಅಚ್ಚಕನ್ನಡ ನಾಡಾಗಿತ್ತೆಂದು ವರ್ಣಿಸಿದ್ದಾನೆ. ವಿಜಾಪುರದ ಜಿಲ್ಹೆಯಲ್ಲಿ ಈಗಿರುವ ಪಟ್ಟದಕಲ್ಲು ಎಂಬದೇ ಕಿಸುವೊಳಲು. ಕೊಣಪನಗರವು ಸದ್ಯಕ್ಕೆ ಬಳ್ಳಾರಿಗೂ ಗದಗಿಗೂ ನಡುವಿರುವ ಕೊಪ್ಪಳವೆಂಬ ಗ್ರಾಮವು. ಪುರಿಗೆರೆಯು ಸದ್ಯದ ಲಕ್ಷ್ಮೇಶ್ವರವು. ಒಂಕುಂದವು ಬೆಳಗಾವ ಜಿಲ್ಹೆಯೊಳಗಿನ ಒಕ್ಕುಂದವೆಂಬ ಊರು.

**ಪ್ರಾಚೀನ ಕಾಲದ ಅಚ್ಚ ಕನ್ನಡ ನಾಡು.**

ಆ ಕಾಲದ ಕರ್ನಾಟಕದ ಇತಿಹಾಸವೂ ಪೂರ್ಣವಾಗಿ ಗೊತ್ತಾಗಿಲ್ಲ. ಆದರೂ ಕನ್ನಡ ಚಕ್ರವರ್ತಿಗಳು ವೈಭವದಿಂದ ಆಳಿದ ಬಗ್ಗೆಯೂ ಆಯಾ ಕಾಲದ ಕನ್ನಡಿಗರು ಆಡಿದ ಯುದ್ಧಗಳು, ಕನ್ನಡ ಶಿಲ್ಪಿಗರು ರಚಿಸಿದ ಅಲೌಕಿಕವಾದ ಕಟ್ಟಡಗಳು, ಕನ್ನಡ ಕವಿಗಳು ಬರೆದ ಉತ್ತಮ ಕಾವ್ಯಗಳು, ಕನ್ನಡಿಗರ ಧರ್ಮ ಹಾಗೂ ನಡೆವಳಿಗಳು ಇವುಗಳ ಬಗ್ಗೆಯೂ ಎಷ್ಟೋ ಸಂಗತಿಗಳನ್ನು ವಿದ್ವಾಂಸರು ಗೊತ್ತುಹಚ್ಚಿರುವರು. ಇದರಿಂದ ನಾವು ನಮ್ಮ ಪೂರ್ವಜರ ಅಭಿಮಾನ ತಾಳುವಂಥ ಎಷ್ಟೋ ಸಂಗತಿಗಳು ಬಯಲಿಗೆ ಬಂದಿರುವವು. ಹಿಂದೆ ವರ್ತಮಾನ ಪತ್ರಗಳಿರಲಿಲ್ಲ; ಇತಿಹಾಸಗ್ರಂಥಗಳನ್ನು ಬರೆದಿಡುವ ಸಾಂಪ್ರದಾಯವಿರಲಿಲ್ಲ; ಅರಸರು ಗುಡಿಗಳನ್ನಾಗಲಿ ಕೆರೆಕಾಲುವೆಗಳನ್ನಾಗಲಿ ಕಟ್ಟಿಸಿದಾಗ ಕೆಲವು

**. ಇತಿಹಾಸದ ಆಧಾರಗಳು.**



ಸಂಗತಿಗಳನ್ನು ಅವುಗಳ ಮೇಲೆ ಕೆತ್ತಿಸಿಡುತ್ತಿದ್ದರು. ಇವುಗಳಿಂದ ಆ ರಾಜರ ವಂಶಾವಳಿ, ಅವರು ಮಾಡಿದ ಯುದ್ಧಗಳೇ ಮೊದಲಾದ ಮಹತ್ವದ ಕೆಲಸಗಳು ಗೊತ್ತಾಗುವವು. ಮೈಸೂರು ಪ್ರಾಂತದಲ್ಲಿ ಆಳಿದ ಗಂಗರು ಎಂಬ ಅರಸರು ತಲಕಾಡು ಎಂಬ ತಮ್ಮ ರಾಜಧಾನಿಯಲ್ಲಿ ಕೆತ್ತಿಸಿಟ್ಟ ಶಿಲಾಲೇಖದ ಚಿತ್ರ

ವನ್ನು ಇಲ್ಲಿ ಕೊಟ್ಟಿರುವೆವು. ಇದರ ಭಾಷೆಯೂ ಅಕ್ಷರಗಳೂ ಹಳಗನ್ನಡದ ವಿರುವವು. ಇದನ್ನು ಈಗ ಮೈಸೂರಿನಲ್ಲಿರುವ ವಸ್ತುಸಂಗ್ರಹಾಲಯದಲ್ಲಿಟ್ಟಿರುವರು. ಅರಸರು ವೀರರಿಗಾಗಲಿ, ರಾಜಪ್ರಜರಿಗೆ ಹಿತವಾಗುವಂಥ ಕೆಲಸಗಳನ್ನು ಮಾಡಿದವರಿಗಾಗಲಿ ಭೂಮಿಗಳನ್ನೂ ಹೊಲಗಳನ್ನೂ ಉಂಬಳಿ ಹಾಕಿಕೊಡುವಾಗ ತಾಮ್ರದ ತಗಡಿನ ಮೇಲೆ ಕೆತ್ತಿಸಿದ ಶಾಸನಗಳನ್ನು ಕೊಡುತ್ತಿದ್ದರು. ಇವುಗಳಿಗೆ ತಾಮ್ರಪಟಗಳೆಂಬ ಹೆಸರು. ಹಿಂದೆ ಕರ್ನಾಟಕದಲ್ಲಿ ಆಳಿದ ಚಾಲುಕ್ಯರೆಂಬ ಅರಸರು ತಮ್ಮ ರಾಜಮುದ್ರೆ ಸಹಿತ ಕೆತ್ತಿಸಿಕೊಟ್ಟ ಒಂದು ತಾಮ್ರಪಟದ ಚಿತ್ರವನ್ನು ಇಲ್ಲಿ ಕೊಟ್ಟಿರುವೆವು. ಇದು ಈಗ ಲಂಡನ ಪಟ್ಟಣದೊಳಗಿನ ಬ್ರಿಟಿಷ್ ಮ್ಯುಜಿಯಮ್ ಎಂಬ ಹೆಸರಾದ ವಸ್ತುಸಂಗ್ರಹಾಲಯದಲ್ಲಿರುವದು. ಕವಿಗಳು ತಮ್ಮ ಒಡೆಯರ ವಿಕ್ರಮಗಳನ್ನೂ ಚರಿತ್ರವನ್ನೂ ಕಾವ್ಯಗಳಲ್ಲಿ ಕೊಂಡಾಡುತ್ತಿದ್ದರು. ಬಾದಾಮಿಯ ಚಾಲುಕ್ಯ ಅರಸರಲ್ಲಿ ವಿಖ್ಯಾತನಾದ ವಿಕ್ರಮಾದಿತ್ಯನ ಆಶ್ರಯದಲ್ಲಿದ್ದ ಬಿಲ್ಹಣನೆಂಬ ಹೆಸರಾದ ಕವಿಯು ವಿಕ್ರಮಾಂಕದೇವಚರಿತವೆಂಬ ಸಂಸ್ಕೃತಕಾವ್ಯದಲ್ಲಿ ತನ್ನ ಒಡೆಯನ ಚರಿತ್ರವನ್ನು ಮನೋಹರವಾಗಿ ಬಣ್ಣಿಸಿರುವನು. ಇಂಥ ಕಾವ್ಯಗಳಿಂದ ಆಯಾ ಕಾಲದ ಕನ್ನಡಿಗರ ಸ್ಥಿತಿಗತಿಗಳು ಗೊತ್ತಾಗುವವು. ಪರದೇಶಗಳ ಪ್ರವಾಸಿಗಳು ಇಲ್ಲಿಗೆ ಬಂದು ತಾವು ನೋಡಿದ್ದನ್ನೆಲ್ಲ ಬರೆದಿಟ್ಟಿರುವರು. ಇವಲ್ಲದೆ, ಅಲ್ಲಲ್ಲಿ ಕಲಿಗಳ ನೆನಪಿಗೆಂದು ನಡಿಸಿಟ್ಟ ವೀರಗಲ್ಲುಗಳೂ ಪತಿವ್ರತಾಸ್ತ್ರೀಯರ ನೆನಪಿಗೆಂದು ನಿಲ್ಲಿಸಿದ ಮಾಸತಿಗಲ್ಲುಗಳೂ ಇರುವವು. ಇವುಗಳನ್ನೆಲ್ಲ ಅಭ್ಯಾಸಿಸಿ, ವಿದ್ವಾಂಸರು ಕರ್ನಾಟಕದ ಪ್ರಾಚೀನ ಕಾಲದ ಇತಿಹಾಸವನ್ನು ಬರೆದಿರುವರು.

**ಇತಿಹಾಸದ ಭಾಗಗಳು.**

ಕರ್ನಾಟಕದ ಇತಿಹಾಸದಲ್ಲಿ ಮೂರು ಭಾಗಗಳನ್ನು ಮಾಡಬಹುದು. (೧) ಕ್ರಿಸ್ತಶಕದ ಆರಂಭದಿಂದ ೧೪ನೆಯ ಶತಮಾನದ ವರೆಗೆ ಪ್ರಾಚೀನ ಕಾಲ. ಈ ಕಾಲದ ಮೊದಲಿನ ಅವಧಿಯ ಬಗ್ಗೆ ವಿಶೇಷವೇನೂ ಗೊತ್ತಾಗಿಲ್ಲ. ೫ರಿಂದ ೭ನೆಯ ಶತಮಾನದ ವರೆಗೆ **ಚಾಲುಕ್ಯರು** ಕರ್ನಾಟಕದ ಒಡೆಯರಿದ್ದರು. ಮುಂದೆ ೩ ಶತಮಾನಗಳ ವರೆಗೆ **ರಾಷ್ಟ್ರಕೂಟರು** ಆಳಿದರು; ಮತ್ತೆ ಚಾಲುಕ್ಯರು ೧೪ನೆಯ ಶತಮಾನದ ವರೆಗೆ ಬಹಳ ವೈಭವದಿಂದ ಇದ್ದರು. (೨) ೧೪ರಿಂದ ೧೬ನೆಯ ಶತಮಾನದ ವರೆಗೆ ಮಧ್ಯಕಾಲ. ಆಗ **ವಿಜಯನಗರದ ಸಾಮ್ರಾಜ್ಯವು**

ದಕ್ಷಿಣಹಿಂದುಸ್ತಾನದಲ್ಲೆಲ್ಲ ಮೆರೆಯುತ್ತಿತ್ತು. (೩) ೧೭ನೆಯ ಶತಮಾನ ದಿಂದೀಚೆಗೆ ಅರ್ವಾಚೀನ ಕಾಲವು. ವಿಜಯನಗರದ ತೇಜವು ಅಡಗಿದ ಬಳಿಕ ೩ ಶತಮಾನಗಳ ವರೆಗೆ ಮುಸಲ್ಮಾನರೂ ಮಹಾರಾಷ್ಟ್ರರೂ ಕರ್ನಾಟಕದಲ್ಲಿ ಹೊಡೆದಾಡುತ್ತಿದ್ದರು. ಆಗ ಕನ್ನಡ ನಾಡಿನ ಸ್ಥಿತಿಯು ನೆಟ್ಟಗಿರಲಿಲ್ಲ, ೧೯ನೆಯ ಶತಮಾನದಿಂದೀಚೆಗೆ ಹಿಂದುಸ್ತಾನದ ಇತರ ಪ್ರಾಂತಗಳಂತೆಯೇ ಕರ್ನಾಟಕವೂ ಬ್ರಿಟಿಷರ ವಶಕ್ಕೆ ಸೇರಿದಂದಿನಿಂದ ಇಲ್ಲಿಯೂ ಶಾಂತತೆಯು ನೆಲೆಗೊಂಡಿರುತ್ತದೆ.

---

## ೨ನೇ ಪ್ರಕರಣ.

## ಕರ್ನಾಟಕದ ಸ್ವಾಭಾವಿಕ ಸ್ವರೂಪ, ಹುಟ್ಟುವಳಿ.

**ಸ್ವಾಭಾವಿಕ ಭಾಗಗಳು.**

ಕರ್ನಾಟಕದಲ್ಲಿ ಮುಖ್ಯ ಮೂರು ಸ್ವಾಭಾವಿಕ ವಿಭಾಗಗಳನ್ನು ಮಾಡಬಹುದು. ಮೊದಲನೇ ವಿಭಾಗದಲ್ಲಿ ತುಂಗಭದ್ರಾನದಿಯ ಉತ್ತರಕ್ಕೆ ಇರುವ ಪ್ರದೇಶವು ಸೇರುವದು. ಈ ದೊಡ್ಡ ಬೈಲು ಪಶ್ಚಿಮದಿಂದ ಪೂರ್ವಕ್ಕೆ ಇಳಕಲಾಗಿದೆ. ಎರಡನೇ ವಿಭಾಗದಲ್ಲಿ ತುಂಗಭದ್ರಾನದಿಯ ದಕ್ಷಿಣಕ್ಕೆ ಇರುವ ಪ್ರದೇಶವು ಬರುವದು. ಇದು ಸುಮಾರು ೩,೦೦೦ ಫೂಟು ಎತ್ತರವಾದ ತಪ್ಪಲುಂಟು. ಈ ತಪ್ಪಲು ಪಶ್ಚಿಮ ದಕ್ಷಿಣ ಭಾಗಗಳಲ್ಲಿ ಎತ್ತರವದೆ; ಉತ್ತರಕ್ಕೂ ಪೂರ್ವಕ್ಕೂ ಇಳಕಲಾಗಿದೆ. ಮೂರನೇ ವಿಭಾಗದಲ್ಲಿ ಸಹ್ಯಾದ್ರಿಗೂ ಸಮುದ್ರಕ್ಕೂ ನಡುವೆ ಇರುವ ಕರ್ನಾಟಕದ ಕಿರಿನೆಲವು ಬರುತ್ತದೆ. ಇದು ವಸ್ತುತಃ ಕರ್ನಾಟಕದ ಭಾಗವಲ್ಲ. ಮಲಿಯಾಳದ ಉತ್ತರಭಾಗ, ತುಳುವುನಾಡು, ಹೈಗನಾಡು, ಗೋಮಾಂತಕದ ದಕ್ಷಿಣಭಾಗ, ಇಷ್ಟೆಲ್ಲ ಕೂಡಿ ಈ ಘಟ್ಟದ ಕೆಳಗಿನ ಪ್ರದೇಶವಾಗಿರುತ್ತದೆ. ಇದರಲ್ಲಿ ಕನ್ನಡ ಭಾಷೆಯು ತಕ್ಕಮಟ್ಟಿಗೆ ನಡೆಯುವ ಕಾರಣ ಇದು ಕರ್ನಾಟಕದೊಳಗೆ ಎಣಿಸಲ್ಪಡುತ್ತದೆ. ಇದಲ್ಲದೆ ಪೂರ್ವಸಮುದ್ರತೀರದಲ್ಲಿ ಇರುವ ಆರ್ಕಾಟಪ್ರಾಂತಕ್ಕೆ ಇಂಗ್ಲಿಷ ಇತಿಹಾಸಕರ್ತರು ಕರ್ನಾಟಕವೆನ್ನುತ್ತಾರೆ. ಆದರೆ ಅಲ್ಲಿ ಕನ್ನಡ ಮಾತು ನಡೆಯುವ

ದಿಲ್ಲ. ಆ ಪ್ರಾಂತವು ಕರ್ನಾಟಕದ ಅರಸರ ಕೈಕೆಳಗೆ ಮೊದಲು ಇದ್ದದರಿಂದ ಅದಕ್ಕೆ ಈ ಹೆಸರು ಬಂದಿದೆ.

**ಬೆಟ್ಟ, ಹೊಳೆಗಳು.**

ಕರ್ನಾಟಕದಲ್ಲಿ ಬೆಟ್ಟಗಳು ವಿಶೇಷ ಇಲ್ಲ. ಸಹ್ಯಾದ್ರಿ, ನೀಲಗಿರಿ ಎಂಬೆರಡೇ ಮುಖ್ಯ ಬೆಟ್ಟಗಳು. ಸಹ್ಯಾದ್ರಿಯ ಸಾಲು ದಕ್ಷಿಣೋತ್ತರ ಹಬ್ಬಿದೆ; ಅದರ ಮೇಲೆ ದಟ್ಟಾದ ಹಳುವುಗಳುಂಟು. ಅದು ಸಾಧಾರಣವಾಗಿ ೩,೦೦೦ ಫೂಟು ಎತ್ತರವಿದೆ. ನೀಲಗಿರಿಯ ಸಾಲು ಪಶ್ಚಿಮಘಟ್ಟದ ದಕ್ಷಿಣತುದಿಯಿಂದ ಪೂರ್ವಕ್ಕೆ ಹಬ್ಬಿದೆ; ಈ ಸಾಲು ಪಶ್ಚಿಮಘಟ್ಟಕ್ಕಿಂತ ಸ್ವಲ್ಪ ಹೆಚ್ಚು ಉನ್ನತ ಉಂಟು. ಸಹ್ಯಾದ್ರಿಯಂತೆ ನೀಲಗಿರಿಯ ಮೇಲೆ ದೊಡ್ಡ ಹಳುವುಗಳಿಲ್ಲ. ಆದದರಿಂದ ಅದರ ಮೇಲಿನ ಹವೆ ಬಹು ಆರೋಗ್ಯಕರವದೆ. ಕರ್ನಾಟಕದಲ್ಲಿ ಕೃಷ್ಣಾನದಿಯೇ ಎಲ್ಲಕ್ಕೂ ದೊಡ್ಡ ಹೊಳೆಯು (೭೦೦ ಮೈಲು ಉದ್ದ). ಇದು ಮಹಾಬಲೇಶ್ವರದಲ್ಲಿ ಹುಟ್ಟಿ ಆಗ್ನೇಯಕ್ಕೆ ಹರಿದು ಸಾಂಗಲಿಯ ಹತ್ತರ ಕರ್ನಾಟಕದ ಉತ್ತರಮೇರೆಯನ್ನು ದಾಟಿ ನಿಜಾಮನ ರಾಜ್ಯದ ದಕ್ಷಿಣಮೇರೆಯಾಗಿ ಹರಿದು ಬಂಗಾಲದ ಉಪಸಾಗರಕ್ಕೆ ಕೂಡುತ್ತದೆ. ದಕ್ಷಿಣದೇಶದಲ್ಲಿ ಈ ನದಿಯ ಮಾಹಾತ್ಮ್ಯ ಬಹಳ; ಇದಕ್ಕೆ ದಕ್ಷಿಣಗಂಗಾ ಎನ್ನುತ್ತಾರೆ. ಉತ್ತರ ಕರ್ನಾಟಕದೊಳಗಿಂದ ಹರಿಯುವ ಹಲವು ನದಿಗಳು ಕೃಷ್ಣೆಗೆ ಕೂಡುತ್ತವೆ. ಅವುಗಳಲ್ಲಿ ಭೀಮಾ, ಘಟಪ್ರಭಾ, ಮಲಪ್ರಭಾ, ತುಂಗಭದ್ರಾ ಎಂಬವು ಮುಖ್ಯ. ಗೋಕಾವಿಯ ಹತ್ತರ ಘಟಪ್ರಭಾನದಿಯ ತಡಸಲು ಬಹಳ ಪ್ರಸಿದ್ಧವದೆ. ಅಲ್ಲಿ ಗುಡ್ಡದ ಮೇಲಿಂದ ಸುಮಾರು ೧೮೦ ಫೂಟುಗಳ ಎತ್ತರದಿಂದ ನದಿಯ ಪ್ರವಾಹವು ಕೆಳಗೆ ಬೀಳುತ್ತದೆ. ತುಂಗಭದ್ರಾನದಿಯು ತುಂಗಾ, ಭದ್ರಾ ಎಂಬೆರಡು ನದಿಗಳು ಕೂಡಿ ಆಗಿರುತ್ತದೆ. ಇದರ ದಡದಲ್ಲಿ ಹರಿಹರ, ಆನೇಗುಂದಿ, ಹಂಪೆ ಎಂಬ ಇತಿಹಾಸಪ್ರಸಿದ್ಧ ಪಟ್ಟಣಗಳುಂಟು. ಇವಲ್ಲದೆ ಡೋಣಿಗಳೆಂಬ ಉಪ್ಪುನೀರಿನ ಪ್ರವಾಹಗಳು ಈ ದೇಶದ ಉತ್ತರಭಾಗದಲ್ಲಿ ಹರಿದು ಕೃಷ್ಣೆಗೆ ಕೂಡುತ್ತವೆ. ಇವು ಹರಿಯುವ ಪ್ರಾಂತಕ್ಕೆ ಡೋಣಿಸಾಲೆಂದೆನ್ನುವರು. ಕಾವೇರೀನದಿಯು ಕೊಡಗುಸೀಮೆಯಲ್ಲಿ ಸಹ್ಯಾದ್ರಿಯಲ್ಲಿ ಹುಟ್ಟಿ, ಡೊಂಕುಡೊಂಕಾಗಿ ಹರಿದು ಕರ್ನಾಟಕದ ಪೂರ್ವಮೇರೆಯನ್ನು ದಾಟಿ ಹಲವು ಮುಖಗಳಿಂದ ಬಂಗಾಲದ ಉಪಸಾಗರಕ್ಕೆ ಕೂಡಿರುತ್ತದೆ. ಇದರ ದಡದಲ್ಲಿ ಶ್ರೀರಂಗಪಟ್ಟಣ ಉಂಟು. ಕಾವೇರಿಯಿಂದ ತೆಗೆದ

ಕಾಲುವೆಗಳಿಂದ ಒಕ್ಕಲತನಕ್ಕೆ ಬಹಳ ಉಪಯೋಗವಾಗುತ್ತದೆ. ಇದಲ್ಲದೆ **ಪೆನ್ನಾರು, ಪಾಲಾರು** ಮುಂತಾದ ಹೊಳೆಗಳು ದಕ್ಷಿಣಕರ್ನಾಟಕದಲ್ಲಿ ಪೂರ್ವಕ್ಕೆ ಹರಿಯುತ್ತವೆ. ಘಟ್ಟದ ಕೆಳಗಿನ ಸೀಮೆಯಲ್ಲಿ ಹಲವು ಸಣ್ಣ ಸಣ್ಣ ಹೊಳೆಗಳುಂಟು. ಇವೆಲ್ಲ ಸಹ್ಯಾದ್ರಿಯಲ್ಲಿ ಹುಟ್ಟಿ ಅರಬೀಸಮುದ್ರಕ್ಕೆ ಕೂಡುತ್ತವೆ. ಶರಾವತಿಹೊಳೆಯು **ಗೆರಸಪ್ಪೆಯ** ಹತ್ತರ ನಾಲ್ಕೈದು ಹರದಾರಿಯ ಮೇಲೆ ಒಂದು ದೊಡ್ಡ ತಡಸಲವಾಗಿ ೯೦೦ ಫೂಟುಗಳ ಮೇಲಿಂದ ಕೆಳಗೆ ಬೀಳುತ್ತದೆ. ಈ ಸ್ಥಳದ ಅದ್ಭುತಸೌಂದರ್ಯವನ್ನೂ ಭವ್ಯತನವನ್ನೂ ಎಷ್ಟು ಬಣ್ಣಿಸಿದರೂ ತೀರದು. ಈ ತಡಸಲಕ್ಕೆ **ಗೆರಸಪ್ಪೆಯ ಜೋಗ**ವೆಂದೆನ್ನುತ್ತಾರೆ.

**ಭೂಮಿಯ ಗುಣ, ಹವೆ.**

ಪಶ್ಚಿಮಘಟ್ಟದ ಮೇಲಿನ ಭಾಗಕ್ಕೆ ಮಲ್ನಾಡು* ಇಲ್ಲವೆ ಮಲ್ಲಾಡು ಎಂಬ ಹೆಸರು. ಅಲ್ಲಿ ಗುಡ್ಡಗಳು ಬಹಳ. ಅಲ್ಲಲ್ಲಿಗೆ ದಟ್ಟನ್ನ ಹಳುವುಗಳುಂಟು. ಅಲ್ಲಿಯ ನೆಲ ಕೆಂಪು; ಕಸುವು ಕಡಿಮೆ. ಪೂರ್ವಕ್ಕೆ ಇರುವ ಬೈಲುಸೀಮೆಯಲ್ಲಿ ಗುಡ್ಡಗಳೂ ಮರಗಳೂ ತೀರ ಅಪರೂಪ. ನೆಲ ಕಪ್ಪು, ಚೆನ್ನಾಗಿ ಬೆಳೆಯುವದು. ಆದ್ದರಿಂದ ಈ ಸೀಮೆಗೆ ಕರಿನಾಡು† (ಕರ್ನಾಡು) ಎಂತಲೂ ಬೆಳವಲ ಎಂತಲೂ ಅನ್ನುವದುಂಟು. ಇಲ್ಲಿಯ ನೆಲಕ್ಕೆ ಎರಿನೆಲವೆನ್ನುವರು. ಮಲ್ನಾಡಿನಲ್ಲಿ ಚಳಿ ಬಹಳ; ಆದರೆ ಘಟ್ಟದ ಕೆಳಗೆ ಸೆಕೆ ಬಹಳ. ಈ ಸೀಮೆಯು ಸಮುದ್ರದ ದಂಡೆಗಿರುವದರಿಂದ ಇಲ್ಲಿಯ ಹವೆಯಲ್ಲಿ ಯಾವಾಗಲೂ ಆರ್ದ್ರತೆ ಇರುವದು. ಬೆಳವಲದಲ್ಲಿಯೂ ಸೆಕೆ ಬಹಳ. ಆದರೂ ಬೆಳವಲದ ಹವೆಯು ಬಹು ಆರೋಗ್ಯಕರವು. ಯಾಕೆಂದರೆ ಇಲ್ಲಿಯ ಹವೆಯಲ್ಲಿ ಆರ್ದ್ರತೆ ಕಡಿಮೆಯಿರುವದು. ಮಲ್ನಾಡಿನಲ್ಲಿಯೂ ಘಟ್ಟದ ಕೆಳಗೂ ಮಳೆ ಅತಿಶಯ; ಬೈಲುಸೀಮೆಯಲ್ಲಿ ಕಡಿಮೆ. ಆದ್ದರಿಂದ ಬೇಸಿಗೆಯಲ್ಲಿ ಬೈಲುಸೀಮೆಯೊಳಗೆ ಬಾವಿ ಕೆರೆ ಹಳ್ಳಗಳು ಬತ್ತಿಹೋಗುತ್ತವೆ. ಮಲ್ನಾಡಿನಲ್ಲಿಯೂ ಘಟ್ಟದ ಕೆಳಗೂ ಮಳೆ ಬಹಳ ಬೀಳುವ ಕಾರಣ ಅಲ್ಲಿ ಪ್ರಾಯಶಃ ಹಂಚಿನವಾಗಲಿ ಹುಲ್ಲಿನವಾಗಲಿ ಛಾವಣಿಗಳನ್ನು ಹಾಕುತ್ತಾರೆ. ಬೆಳವಲಿನಲ್ಲಿ ಮಳೆ ಕಡಿಮೆಯಾದ್ದರಿಂದ ಮೇಲ್ಮುದ್ದಿಯ ಮಾಳಿಗೆಯ ಮನೆಗಳೇ ವಿಶೇಷವಾಗಿರುವವು.

---

* ಮಲೆ, ಗುಡ್ಡ. ಮಲ್ನಾಡೆಂದರೆ ಗುಡ್ಡದ ನಾಡು.

† ಈ ಕರಿನಾಡಿನೊಳಗೆ ಹರಿಯುವ ಹೊಳೆಗೆ ಕೃಷ್ಣಾ ಅಂದರೆ ಕಪ್ಪು ಹೊಳೆ ಎಂಬ ಹೆಸರು ಉಂಟಾಗಿದೆ.

ಕೆಂಪುನೆಲಕ್ಕೆ ಮಳೆ ಬಹಳ ಬೇಕು. ಅದರಲ್ಲಿ ವರ್ಷಕ್ಕೆ ಎರಡು ಬೆಳೆಗಳು ಬರುತ್ತವೆ. ಎರಿನೆಲಕ್ಕೆ ಎರಡು ಮೂರು ಮಳೆ ಹೊಡೆದರೆ ಸಾಕು; ಮೇಲಾದ ಬೆಳೆ ಬರುತ್ತದೆ. ಆದರೆ ಎರಿಭೂಮಿಗೆ ವರ್ಷದಲ್ಲಿ ಒಂದೇ ದೊಡ್ಡ ಬೆಳೆಯು. ಕೆಂಪುನೆಲದೊಳಗೆ ಮುಖ್ಯವಾಗಿ ಬರುವ ಪೈರು ನೆಲ್ಲು. ಅದಲ್ಲದೆ ಬಟಗಡ್ಲೆ, ಚನ್ನಂಗಿ, ಅವರಿ ಮುಂತಾದ ಅಕ್ಕಡಿಯ ಫಲಗಳೂ ಆಗುತ್ತವೆ. ತೀರ ಘಟ್ಟದ ಮೇಲಿನ ಸೀಮೆಯ ತೋಟಗಳಲ್ಲಿ ಯಾಲಕ್ಕಿ, ಮೆಣಸು ಮುಂತಾದ ಮಸಾಲೆಯ ಸರಕುಗಳೂ, ತೆಂಗು, ಹಲಸು ಮುಂತಾದ ಫಲಗಳೂ ಬೆಳೆಯುತ್ತವೆ. ಎರಿನೆಲದೊಳಗಿನ ಮುಖ್ಯ ಪೈರು ಗೋದಿ, ಹತ್ತಿ, ಕಡಲೆ, ಜೋಳ, ತೊಗರಿ ಮುಂತಾದವುಗಳು. ಆದರೆ ಇವಲ್ಲದೆ ಹೆಸರು, ಉದ್ದು, ಹುರಳಿ, ಕುಸಿಬೆ, ಅಗಸಿ ಮುಂತಾದ ಅಕ್ಕಡೀ ಫಲಗಳೂ ಹುಟ್ಟುತ್ತವೆ. ತೋಟಗಳಿದ್ದಲ್ಲಿ ಬಾಳೆ, ದ್ರಾಕ್ಷ, ಅಂಜೀರ, ದಾಳಿಂಬ ಮುಂತಾದ ಫಲವೃಕ್ಷಗಳೂ, ತರತರದ ಕಾಯಿಪಲ್ಲೆ, ವೀಳ್ಯದೆಲೆ ಮುಂತಾದವುಗಳೂ ಬೆಳೆಯುತ್ತವೆ. ಇವಲ್ಲದೆ ಮಕ್ಕೇಜೋಳ, ರಾಗಿ, ಸಾವಿ, ಕಬ್ಬು ಮೊದಲಾದ ಬೆಳೆಗಳೂ, ಮಾವು, ಬಾಳೆ, ಲಿಂಬಿ, ಹುಣಸೆ ಮೊದಲಾದ ಗಿಡಗಳೂ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಬೆಳೆಯುತ್ತವೆ. ಸಹ್ಯಾದ್ರಿಯ ಮೇಲಿನ ಹಳುವುಗಳಲ್ಲಿ ತೇಗು, ಹೆದ್ದೇಗು, ಸಿಸುವು, ಮತ್ತಿ, ಶ್ರೀಗಂಧ, ಹೊನ್ನೆ ಮುಂತಾದ ಮರಗಳು ಹೇರಳವಾಗಿ ಬೆಳೆಯುತ್ತವೆ. ಈ ಕಾಡುಗಳಲ್ಲಿ ಹುಲಿ, ಚಿರ್ಚು, ಕರಡಿ, ಕಾಡುಕೋಣ ಮುಂತಾದ ಕಾಡುಮೃಗಗಳು ಬಹಳ. ಬೈಲುಸೀಮೆಯಲ್ಲಿ ಮೊದಲು ಗಿಡಗಳೇ ಕಡಿಮೆ; ಇದ್ದರೆ, ಬೇವು, ಜಾಲಿ, ಆಲ, ಅತ್ತಿ, ಇವೇ ಮೊದಲಾದವು ಇರುವವು. ಇಲ್ಲಿ ಚಿಗರೇ ಹಿಂಡುಗಳು ಬಹಳ. ಬೈಲುಸೀಮೆಯ ದನದಂಥ ಕಸುವುಳ್ಳ ದನ ಮಲ್ನಾಡದಲ್ಲಿಯೂ ಘಟ್ಟದ ಕೆಳಗಿನ ಸೀಮೆಯಲ್ಲಿಯೂ ಇಲ್ಲ. ಬೈಲುಸೀಮೆಯಲ್ಲಿ ಎತ್ತು, ಕೋಣ, ಕತ್ತೆ, ಕುದುರೆ, ಇವೇ ಮುಖ್ಯ ದನಗಳು. ಘಟ್ಟದ ಕೆಳಗೆ ಈ ದನಗಳು, ವಿಶೇಷವಾಗಿ ಕುದುರೆಯು ಅಪರೂಪ.

**ಬೆಳೆಗಳು.**

ಕರ್ನಾಟಕದಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ ಮುಂತಾದ ಧಾತುಗಳು ದೊರೆಯುತ್ತವೆ. ಮೈಸೂರು ಪ್ರಾಂತದ ಕೋಲಾರದ ನೆರೆಯಲ್ಲಿರುವ ಚಿನ್ನದ ಕಣಿಗಳು ಹೆಸರಾಗಿವೆ. ನೀಲಗಿರಿಯೊಳಗೆ ತಾಮ್ರದ ಕಣಿಗಳುಂಟು. ಕಬ್ಬಿಣವಂತು ಎಷ್ಟೋ ಸ್ಥಳಗಳಲ್ಲಿ ಸಿಕ್ಕುತ್ತದೆ.

**ಖನಿಜಗಳು.**

ಘಟಪ್ರಭಾನದಿಯ ದಂಡೆಯಲ್ಲಿ ಸ್ಲೇಟಿನ ಕಲ್ಲುಗಳೂ, ಮಸೆಯುವ ಕಲ್ಲುಗಳೂ, ಸಾಣೇಕಲ್ಲುಗಳೂ, ಅಚ್ಚುಹಾಕುವ ಕಲ್ಲುಗಳೂ ವಿಪುಲವಾಗಿ ದೊರೆಯುತ್ತವೆ.

---

## ೩ನೇ ಪ್ರಕರಣ.

## ಜನರು, ಧರ್ಮ, ಉದ್ಯೋಗ, ಭಾಷೆ.

**ಮೂಲ ನಿವಾಸಿಗಳು.**

ಕರ್ನಾಟಕದ ಮೂಲನಿವಾಸಿಗಳು ದ್ರವಿಡರು. ಈ ದ್ರವಿಡರೂ ಹಿಂದುಸ್ತಾನದೊಳಗಿನ ಗುಡ್ಡಗಾಡುಗಳಲ್ಲಿ ಈಗಲೂ ವಾಸಿಸುವ ಕಾಡುಜನರೂ ಒಂದೇ ಕುಲದವರೆಂದು ಕೆಲವು ವಿದ್ವಾಂಸರ ಮತವಿರುವದು. ಕರ್ನಾಟಕದೊಳಗೆ ಅಚ್ಚ-ದ್ರವಿಡಕುಲದವರು ಈಗ ಎಷ್ಟೋ ಜನರಿರುತ್ತಾರೆ. ಸಾಮುದ್ರಿಕ ಲಕ್ಷಣಗಳಿಂದ ಇವರನ್ನು ಈಗ ನಿಶ್ಚಯವಾಗಿ ಕಂಡುಹಿಡಿಯಬಹುದಾಗಿದೆ. ಆ ಲಕ್ಷಣಗಳು ಯಾವವೆಂದರೆ:—ನಿಲುವಿಕೆಯೂ ಕೈಕಾಲುಗಳೂ ಗಿಡ್ಡ; ಮೂಗೂ ಕಣ್ಣುಗಳೂ ಸಣ್ಣವು; ಬಾಯಿಯೂ ಕಿವಿಗಳೂ ದೊಡ್ಡವು; ಮೋರೆ ಅಗಲಾದದ್ದು. ಕುರುಬರು, ಬಕದರು, ಕೊರವರು, ಹಳೆಪೈಕರು, ಮೊಗಾಯರು, ಮುಕವರು, ಬೇಡರು, ಚಿಗರೇ ಬಲೆಗಾರರು ಮುಂತಾದವರು ತೀರ ಕಡಿಮೇ ವರ್ಗದ ದ್ರವಿಡರು; ಮೊದಲಿಯಾರರು, ನಾಯರರು, ಒಂಟರು, ದೇವಾಂಗರು, ಮಲವರು ಮುಂತಾದವರು ಸುಧಾರಿಸಿದ ದ್ರವಿಡಜಾತಿಯವರುಂಟು.

**ಸದ್ಯದ ನಿವಾಸಿಗಳು.**

ಇವರ ಹೊರತು ಸದ್ಯಕ್ಕೆ ಕರ್ನಾಟಕದಲ್ಲಿರುವ ಜನರು ಆರ್ಯದ್ರವಿಡರ ಮಿಶ್ರಕುಲದವರೆಂದು ಎಣಿಸಲ್ಪಡುವರು. ಆರ್ಯರ ಲಕ್ಷಣಗಳು ದ್ರವಿಡರ ಲಕ್ಷಣಗಳಿಂದ ತೀರ ಭಿನ್ನವಾದವಿರುವವು. ಇವರ ನಿಲುವಿಕೆ ಎತ್ತರ, ಮೋರೆಯು ಸ್ವಲ್ಪ ಉದ್ದ, ಮೂಗೂ ಉದ್ದ, ಮೈಬಣ್ಣ ಕೆಂಪು, ನೋಡಲಿಕ್ಕೆ ಚಂದ ಕಾಣುವರು. ಇವರು ಎಷ್ಟೋ ಸಾವಿರ ವರುಷಗಳ ಹಿಂದೆ ಹಿಂದುಸ್ತಾನದ ವಾಯವ್ಯದ ಮಾರ್ಗದಿಂದ ಬಂದು ಉತ್ತರದಲ್ಲಿಯೂ ಈ ದೇಶದಲ್ಲಿಯೂ ಒಕ್ಕಲಾಗಿ ನಿಂತರು. ಬರಬರುತ್ತ ಇವರು ಸುಧಾರಿಸಿದ ದ್ರವಿಡರೊಡನೆ ಕೂಡಿ ಅವರಿಗೆ ತಮ್ಮ ವಿದ್ಯೆಯನ್ನೂ ಕಲೆಗಳನ್ನೂ ನಡಾವಳಿಗಳನ್ನೂ ಕಲಿಸಿದರು. ಸದ್ಯದ ಕರ್ನಾಟಕದ ಜನರಲ್ಲಿ

ಮೂಲ ಸ್ಥಲಭೇದದಿಂದ ಕರ್ನಾಟಕರು, ದೇಶಸ್ಥರು, ಕೊಂಕಣಸ್ಥರು, ಹೈಗರು, ಗೌಡಸಾರಸ್ವತರು ಮೊದಲಾದ ವರ್ಗಗಳಿರುವವು. ಕರ್ನಾಟಕದ ನಿವಾಸಿ

**ಧರ್ಮಗಳೂ ಮತಗಳೂ.**

ಗಳಲ್ಲಿ ಧರ್ಮಭೇದದಿಂದ ಬ್ರಾಹ್ಮಣರು, ಲಿಂಗವಂತರು, ಜೈನರು, ಮುಸಲ್ಮಾನರು, ಕ್ರೈಸ್ತರು ಎಂಬ ಐದು ಸ್ಥೂಲಭಾಗಗಳನ್ನು ಮಾಡಬಹುದು. ಈ ಎಲ್ಲ ಧರ್ಮಗಳ ಜನರಲ್ಲಿ ಮತಭೇದದಿಂದ ಒಳಭೇದಗಳುಂಟಾಗಿರುವವು. ಬ್ರಾಹ್ಮಣರಲ್ಲಿ ವೈಷ್ಣವರು, ಶೈವರು, ರಾಮಾನುಜರು ಎಂಬ ಬೇರೆ ಬೇರೆ ಮತಗಳುಂಟು. ಪುರಾತನಕಾಲದಲ್ಲಿ ಕರ್ನಾಟಕದಲ್ಲಿ ಬೌದ್ಧಧರ್ಮವು ಒಳ್ಳೇ ಸ್ಥಿತಿಯಲ್ಲಿತ್ತು; ಆದರೆ ಈಗ ಆ ಧರ್ಮದ ಜನರು ಇಲ್ಲಿ ಅಪರೂಪವಾಗಿರುವರು.

ಬ್ರಾಹ್ಮಣಧರ್ಮಕ್ಕೆ ವೇದಧರ್ಮವೆಂದೂ ಹೆಸರುಂಟು. ಯಾಕೆಂದರೆ ವೇದ ಮೊದಲಾದ ಅತಿ ಪುರಾತನ ಗ್ರಂಥಗಳು ಈ ಧರ್ಮದ ಪ್ರಮಾಣ ಗ್ರಂಥ

**ಬ್ರಾಹ್ಮಣ ಧರ್ಮ.**

ಗಳಾಗಿವೆ. ಬ್ರಾಹ್ಮಣರು ಆತ್ಮ-ಮುಕ್ತಿಗಳನ್ನೂ, ಯಜ್ಞಯಾಗಾದಿಗಳನ್ನು ಮಾಡುವದನ್ನೂ, ಕರ್ಮಕ್ಕೆ ತಕ್ಕಂತೆ ಜನ್ಮಾಂತರಗಳನ್ನೂ, ವರ್ಣಭೇದಗಳನ್ನೂ ಒಪ್ಪಿಕೊಳ್ಳುವರು. ವೈದಿಕ ಧರ್ಮದವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು. ಪುರಾತನಕಾಲದಲ್ಲಿ ಉದ್ಯೋಗಭೇದದಿಂದ ಈ ವರ್ಣಗಳನ್ನು ನಿಯಮಿಸಿದ್ದರು. ಆದರೆ ಸದ್ಯಕ್ಕೆ ಅವುಗಳಿಗೆ ಜಾತಿಯ ಸ್ವರೂಪವು ಬಂದಂತಾಗಿದೆ. ಇವರಲ್ಲಿ ಬ್ರಾಹ್ಮಣರೇ ಶ್ರೇಷ್ಠರೆನಿಸಿಕೊಂಡದ್ದರಿಂದ ಈ ಧರ್ಮವು ಬ್ರಾಹ್ಮಣಧರ್ಮವೆಂದು ಹೆಸರಾಗಿರುವದು. ರಜಪೂತರೂ ಆರೇರೂ ತಾವು ಕ್ಷತ್ರಿಯರೆಂದು ಹೇಳುವರು. ಕೋಮಟಿಗರು ತಾವು ವೈಶ್ಯರೆಂದು ತಿಳಿಯುವರು. ಮೇಲೆ ಹೇಳಿದ ಅಚ್ಚ ದ್ರವಿಡಕುಲದವರೆಲ್ಲರು ಶೂದ್ರರು. ಇವರಲ್ಲಿಯೂ ಅಸಂಖ್ಯ ಅವಾಂತರ ಭೇದಗಳುಂಟು. ಈ ಜಾತಿಗಳ ಜನರೆಲ್ಲರು ಬಹುತರವಾಗಿ ಬ್ರಾಹ್ಮಣರೇ ತಮ್ಮ ಗುರುಗಳೆಂದು ಎಣಿಸುತ್ತಾರೆ. ಆದರೆ ಲಿಂಗವಂತರಿಗೂ ಜೈನರಿಗೂ ಮಾತ್ರ ಅವರವರ ಗುರುಗಳುಂಟು.

ಸುಮಾರು ೨೫೦೦ ವರ್ಷಗಳ ಹಿಂದೆ ಶಾಕ್ಯವಂಶದ ಅರಸುಮಗನಾದ ಗೌತಮನೆಂಬ ಕ್ಷತ್ರಿಯನು ಯಜ್ಞಯಾಗಾದಿಕರ್ಮಗಳಿಂದ ಮುಕ್ತಿಯು

**ಬೌದ್ಧಧರ್ಮ.**

ಸುಲಭವಾಗಿ ದೊರೆಯುವದಿಲ್ಲೆಂದು, ಸಂಸಾರವನ್ನು ಬಿಟ್ಟು, ವಿಚಾರ ಮಾಡತೊಡಗಿದನು. ಆಗ ಈತನಿಗೆ ನಿಜವಾದ

ಧರ್ಮತತ್ವಗಳು ಬುದ್ಧಿಗೋಚರವಾದವು. ಈ ಮೂಲಕ ಈತನು ಬುದ್ಧ (ಬಲ್ಲವ) ಎಂದು ಹೆಸರಾದನು. ಉಪವಾಸ, ದೇಹಶೋಷಣ ಮುಂತಾದ ಶರೀರಪೀಡೆಯಿಂದ ಸೌಖ್ಯವು ದೊರೆಯಲಾರದು. ಆದರೆ ಪವಿತ್ರವೂ ಶುದ್ಧವೂ ಆದ ಆಚರಣೆಯು, ಅಹಿಂಸೆಯು, ಭೂತದಯೆಯು ಇವುಗಳಿಂದ ಮಾತ್ರ ಈ ಜನ್ಮದಲ್ಲಿಯೂ ಬರುವ ಜನ್ಮದಲ್ಲಿಯೂ ಸೌಖ್ಯವು ದೊರೆಯುವದು. ಇವೇ ಬೌದ್ಧಧರ್ಮದ ಮುಖ್ಯ ತತ್ವಗಳು. ಬುದ್ಧನ ಮತವು ಜನರಿಗೆ ಸುಲಭವಾಗಿ ತಿಳಿಯಿತು. ಬಹು ಜನರು ಈ ಮತಕ್ಕೆ ಒಲಿದರು. ಅಶೋಕನೆಂಬ ಉತ್ತರ ಹಿಂದುಸ್ತಾನದ ಚಕ್ರವರ್ತಿಯು ಈ ಮತವನ್ನು ಅನುಸರಿಸಿ ಬಹಳ ಹಬ್ಬಿಸಿದನು. ಈತನು ೨೦೦೦ ವರ್ಷಗಳಿಗಿಂತ ಹಿಂದೆ ಆಗಿಹೋದನು. ಕರ್ನಾಟಕದ ಬಹಳ ಭಾಗವು ಈತನ ಒಡೆತನವನ್ನು ಒಪ್ಪಿಕೊಂಡಿತ್ತೆಂದು ಹೇಳುತ್ತಾರೆ. ಈ ಧರ್ಮವು ಕರ್ನಾಟಕದಲ್ಲಿ ಸುಮಾರು ಒಂದು ಸಾವಿರ ವರ್ಷ ನಡೆದು ತೀರ ಕಳೆಗುಂದಿತು.



ಬುದ್ಧನು.

**ಜೈನಧರ್ಮ.**

ಬುದ್ಧನು ತನ್ನ ಮತವನ್ನು ಬೋಧಿಸಿದ ಸಮಯದಲ್ಲಿಯೇ ವರ್ಧಮಾನನೆಂಬ ಬೇರೊಬ್ಬ ಕ್ಷತ್ರಿಯ ರಾಜನು ಮಹಾವೀರನೆಂಬ ಹೆಸರನ್ನು ಧರಿಸಿ ಬೇರೊಂದು ಧರ್ಮವನ್ನು ಸ್ಥಾಪಿಸಿದನು. ಇದು ಬಹುತರ ಬೌದ್ಧಮತದಂತೆಯೇ ಇತ್ತು. ಇದಕ್ಕೆ ಜೈನಮತವೆಂಬ ಹೆಸರು. ಜೈನರು ಬೌದ್ಧರಂತೆ ನಿರ್ವಾಣವನ್ನು ಒಪ್ಪಿಕೊಳ್ಳುವದಿಲ್ಲ; ಕರ್ಮ ಮುಕ್ತಿಗಳನ್ನು ನಂಬುತ್ತಾರೆ. ವಿಶ್ವಪ್ರೀತಿ, ಅಹಿಂಸೆ ಮೊದಲಾದವು ಈ

ಧರ್ಮದ ಮುಖ್ಯ ತತ್ವಗಳು. ಜೈನರು ಹುಳಹುಪ್ಪಡಿ ಮೊದಲು ಮಾಡಿಕೊಂಡು ಯಾವ ಪ್ರಾಣಿಯ ಹಿಂಸೆಯನ್ನೂ ಮಾಡುವದಿಲ್ಲ. ಜೈನರು ಕರ್ನಾಟಕದಲ್ಲಿ ಬಹು ಜನರುಂಟು. ಸುಮಾರು ಸಾವಿರ ವರ್ಷಗಳ ಹಿಂದೆ ಕರ್ನಾಟಕದ ಅರಸರೆಲ್ಲ ಬಹುತರ ಜೈನಮತದವರೇ ಇದ್ದರು. ಆಗ ಜೈನಮತವು ಕರ್ನಾಟಕದಲ್ಲಿ ಬಹು ಪ್ರಬಲವಾಗಿತ್ತು.

ಜೈನಧರ್ಮದ ಪ್ರಾಬಲ್ಯದಿಂದ ವೈದಿಕ ಧರ್ಮವು ಕಳೆಗುಂದುವಂತೆ ತೋರಿತು. ಆಗ ದಕ್ಷಿಣದಲ್ಲಿ **ಶಂಕರಾಚಾರ್ಯ**ನೆಂಬ ಘನವಿದ್ವಾಂಸನು

**ಬ್ರಾಹ್ಮಣಧರ್ಮದ ಮತಭೇದಗಳು.**

ಪ್ರಬಲನಾಗಿ, ಅನೇಕ ಗ್ರಂಥಗಳನ್ನು ಬರೆದು, ವೇದಗಳನ್ನು ಮಾನ್ಯಮಾಡಿದನು. ಶಿವನೇ ಸರ್ವೋತ್ತಮನೆಂದು ಹೇಳುವ ಶೈವಮತವನ್ನು ನೆಲೆಗೊಳಿಸಿದವನು ಇವನೇ. ದೇವರೊಬ್ಬನೇ ನಿತ್ಯನೆಂದು ಹೇಳಿದ್ದರಿಂದ ಇವನ ಮತವು ಅದ್ವೈತಮತವೆಂದು ಹೆಸರಾಗಿದೆ. ೧೧ನೆಯ ಶತಮಾನದ ಕೊನೆಗೆ **ರಾಮಾನುಜಾಚಾರ್ಯ**ನು ಬಿಟ್ಟಿದೇವನೆಂಬ ಹೊಯ್ಸಳ ರಾಜನ ಆಶ್ರಯದಿಂದ ಶ್ರೀವೈಷ್ಣವಮತವನ್ನು ಸ್ಥಾಪಿಸಿದನು. ಆಗ ಬಿಟ್ಟಿದೇವನು ದಕ್ಷಿಣಕರ್ನಾಟಕದ ಬಹು ಭಾಗವನ್ನು ಆಳುತ್ತಿದ್ದನು. ಈ ಮತದವರಿಗೆ ರಾಮಾನುಜರೆಂದೂ ಅನ್ನುವರು. ಉತ್ತರಕರ್ನಾಟಕದಲ್ಲಿ ಶ್ರೀವೈಷ್ಣವರು ತೀರ ಕಡಿಮೆ. ದಕ್ಷಿಣಕರ್ನಾಟಕದಲ್ಲಿ ಇವರು ತಕ್ಕಮಟ್ಟಿಗೆ ಇರುವರು. **ಮಧ್ವಾಚಾರ್ಯ**ನೆಂಬ ತುಳುಬ್ರಾಹ್ಮಣನು ಉಡಿಪಿಯ ಹತ್ತರ ೧೪ನೆಯ ಶತಮಾನದಲ್ಲಿ ಹುಟ್ಟಿ, ವಿಷ್ಣುವೇ ಸರ್ವೋತ್ತಮನೆಂದು ಹೇಳುವ ವೈಷ್ಣವಮತವನ್ನು ಬಲಿಸಿದನು. ಪರಮಾತ್ಮನಂತೆ ಜೀವನೂ ನಿತ್ಯನೆಂದು ಈತನು ಹೇಳಿದ್ದರಿಂದ ಈತನ ಮತವು ದ್ವೈತಮತವೆಂದು ಹೆಸರಾಗಿರುವದು. ಈ ಮತದವರಿಗೆ ಮಾಧ್ವರೆಂತಲೂ ಅನ್ನುವರು.

ಬಸವೇಶ್ವರನೆಂಬ ಆರಾಧ್ಯಬ್ರಾಹ್ಮಣನು ೧೨ನೆಯ ಶತಮಾನದ ಮಧ್ಯಭಾಗದಲ್ಲಿ ಕಲ್ಯಾಣಪಟ್ಟಣದ ಬಿಜ್ಜಳರಾಜನ ಮಂತ್ರಿಯಾಗಿ, ವೀರಶೈವ (ಲಿಂಗಾ

**ಲಿಂಗವಂತ ಮತ.**

ಯತ) ಮತವನ್ನು ಜನರಿಗೆ ಬೋಧಿಸಿದನು. ಇವನು ಸ್ವಲ್ಪ ಕಾಲದೊಳಗೆ ಬಹುಜನ ಶಿಷ್ಯರನ್ನು ಸಂಪಾದಿಸಿ, ತನ್ನ ಮತವನ್ನು ಬಲಿಸಿದನು. ಇದೂ ಶೈವಮತವೇ. ಆದರೆ ಇದರಲ್ಲಿ ಯಜ್ಞ ಮುಂತಾದ ಕರ್ಮಗಳಿಲ್ಲ. ಈ ಮತದ ಯಾವತ್ತು ಜನರು ಲಿಂಗಧಾರಣ

ದೀಕ್ಷೆಯನ್ನು ತಕ್ಕೊಳ್ಳಲಿಕ್ಕೆಬೇಕು. ಶಂಕರಾಚಾರ್ಯರ ಶೈವಮತ, ಬಸವೇಶ್ವರನ ಲಿಂಗವಂತಮತ ಇವು ಪ್ರಬಲವಾದದ್ದರಿಂದ ಜೈನಮತವು ಕರ್ನಾಟಕದಲ್ಲಿ ಹಿಮ್ಮೆಟ್ಟಿತು. ಸದ್ಯಕ್ಕೆ ಲಿಂಗವಂತಮತದವರು ಕರ್ನಾಟಕದಲ್ಲಿ ಬಹಳ ಜನರಿರುವರು.

ಇವೆಲ್ಲ ಆರ್ಯಜನರ ಧರ್ಮ ಹಾಗೂ ಮತಗಳು. ಸುಧಾರಿಸಿದ ದ್ರಾವಿಡರೆಲ್ಲ ಬಹುತರ ಈ ಮತಗಳಲ್ಲಿ ಕೆಲವೊಂದನ್ನು ಅನುಸರಿಸುತ್ತಾರೆ. ಆದರೆ ಬೇಡರು, ಕೊರವರು, ಚಿಗರೇ ಬಲೆಗಾರರು ಮೊದಲಾದ ಕಾಡುಕುಲಗಳಲ್ಲಿ ಭೂತಪಿಶಾಚಗಳ ಪೂಜೆಯೂ ಶಾಕಿನಿಡಾಕಿನಿ ಮೊದಲಾದ ಕಾಡುದೇವತೆಗಳ ಪೂಜೆಯೂ ನಡೆಯುವವು.

ಇವರ ಹೊರತು ಬಹುಶಃ ಯಾವತ್ತು ಕಡೆಯಲ್ಲಿ ಮುಸಲ್ಮಾನರು ಇದ್ದಾರೆ. ಹೆಚ್ಚು ಕಡಿಮೆ ೬೦೦ ವರ್ಷಗಳ ಹಿಂದೆ ಮುಸಲ್ಮಾನರು ಕರ್ನಾಟಕಕ್ಕೆ ಬಂದರು. ಹಾಗೂ ಉತ್ತರಕರ್ನಾಟಕದಲ್ಲಿ ರಾಜ್ಯವಾಳಿದರು. ಮುಂದೆ ಅವರು ಎಷ್ಟೋ ಜನರನ್ನು ಬಲಾತ್ಕಾರದಿಂದ ತಮ್ಮ ಧರ್ಮಕ್ಕೆ ಸೇರಿಸಿದರು. ಈಗಿನ ಮುಸಲ್ಮಾನರು ಬಹುಶಃ ಅವರ ವಂಶಜರು.

ಮುಸಲ್ಮಾನರು ಬಂದ ಬಳಿಕ ಸುಮಾರು ನೂರು ವರ್ಷಗಳ ಮೇಲೆ ಪೋರ್ತುಗೀಜರು ಕರ್ನಾಟಕದಲ್ಲಿ ಕ್ರಿಸ್ತಮತವನ್ನು ತಂದರು. ಇವರು ಮೊದಲು ಗೋಮಾಂತಕದ ಸೀಮೆಯಲ್ಲಿ ಸೀಮೆಗಳನ್ನು ಹಿಡಕೊಂಡು, ಅಲ್ಲಿರುವ ಈ ದೇಶದ ಜನರನ್ನು ಕ್ರಿಸ್ತರನ್ನಾಗಿ ಮಾಡಿದರು. ಮುಸಲ್ಮಾನ ಧರ್ಮವೂ ಕ್ರಿಸ್ತಧರ್ಮವೂ ನಮ್ಮ ದೇಶದವಲ್ಲ.

**ಉದ್ಯೋಗ.**

ಕರ್ನಾಟಕದಲ್ಲಿ ಒಕ್ಕಲತನವೇ ಮುಖ್ಯ ಹೋರೆಯು. ಆದಾಗ್ಯೂ ವ್ಯಾಪಾರ ಇಲ್ಲವೆ ಚಾಕರಿ ಮಾಡಿ ಅಥವಾ ಕೈಗಾರಿಕೆಯಿಂದ ಬಾಳುವ ಬಹು ಜನರುಂಟು. ಬ್ರಾಹ್ಮಣರಲ್ಲಿ ಸರಕಾರದ ಸೇವಾವೃತ್ತಿಯನ್ನ ನುಸರಿಸುವವರು ಬಹಳ; ವ್ಯಾಪಾರ ಇಲ್ಲವೆ ಒಕ್ಕಲತನ ಮಾಡುವವರು ಕಡಿಮೆ. ಆದರೆ ಲಿಂಗವಂತರಲ್ಲಿ ವ್ಯಾಪಾರ-ಒಕ್ಕಲತನಗಳನ್ನು ಮಾಡುವವರೇ ಬಹಳ; ಸರಕಾರದ ನೌಕರೀ ಮಾಡುವವರು ಕಡಿಮೆ. ಜೈನರಲ್ಲಿ ವ್ಯಾಪಾರಸ್ಥರೇ ವಿಶೇಷ; ಒಕ್ಕಲತನವೂ ಸರಕಾರದ ನೌಕರಿಯೂ ಅಷ್ಟಿಲ್ಲ. ಇಂಗ್ಲಿಷರ ಆಳಿಕೆಯಲ್ಲಿ ಎಲ್ಲರಿಗೆ ಭೇದವಿಲ್ಲದೆ ವಿದ್ಯೆ ಸಿಗುವದರಿಂದ ಎಲ್ಲ ಜನರು ಬೇಕಾದ ಉದ್ಯೋಗಗಳನ್ನು ಕೈಕೊಳ್ಳುತ್ತಿದ್ದಾರೆ. ಆದಾಗ್ಯೂ

ನೇಕಾರ, ಕಮ್ಮಾರ, ಉಪ್ಪಾರ, ಕುಂಬಾರ, ಪತ್ತಾರ ಮುಂತಾದವರು ಹಿಂದಿನಂತೆ ತಮ್ಮ ಜಾತಿಯ ಉದ್ಯೋಗಗಳನ್ನೇ ಮಾಡುತ್ತಾರೆ. ಹಲವು ಶೂದ್ರ ಕುಲದವರು ದಿನಗೂಲಿ ಮಾಡಿ ಇಲ್ಲವೆ ಜೀತನಿಂತು ಹೊಟ್ಟೆ ತುಂಬಿಕೊಳ್ಳುತ್ತಾರೆ.

ತಮಿಳು ತೆಲಗು ಈ ದ್ರವಿಡಭಾಷೆಗಳಂತೆ ಕನ್ನಡವು ಶುದ್ಧವೂ ಪ್ರೌಢವೂ ಆದ ಭಾಷೆಯಾಗಿದೆ. ಪ್ರಾಚೀನ ಭಾಷೆಯಾದ್ದರಿಂದ ಕನ್ನಡದಲ್ಲಿ ಹಳೆಗನ್ನಡ, ಹೊಸಗನ್ನಡ ಎಂಬ ಎರಡು ಭೇದಗಳುಂಟು. ಹಳೆಗನ್ನಡವು ಪ್ರಾಚೀನ ಗ್ರಂಥ-ಪ್ರಬಂಧಾದಿಗಳಲ್ಲಿ ಮಾತ್ರ ಕಂಡುಬರುತ್ತದೆ. ಹೊಸಗನ್ನಡವೆಂದರೆ, ಈಗ ಜನರು ಆಡುವ ಭಾಷೆ. ಕನ್ನಡದಲ್ಲಿ ಪ್ರಾಚೀನ ಗ್ರಂಥಸಂಗ್ರಹವು ತಕ್ಕಮಟ್ಟಿಗೆ ಇರುತ್ತದೆ. ವೇದಾಂತ, ಧರ್ಮ, ಪುರಾಣ, ವ್ಯಾಕರಣ ಜ್ಯೋತಿಷ, ವೈದ್ಯಕ ಮುಂತಾದ ವಿಷಯಗಳ ಗ್ರಂಥಗಳೂ, ಮನೋರಂಜಕವಾದ ಕಾವ್ಯಗಳೂ ಹಲವುಂಟು. ಕನ್ನಡ ಭಾಷೆಯು ಇಷ್ಟು ಸುಧಾರಿಸಿ ಪ್ರೌಢಸ್ಥಿತಿಗೆ ಬಂದದ್ದು ಜೈನರಿಂದ. ಜೈನರು ಕರ್ನಾಟಕದಲ್ಲಿ ಪ್ರಬಲರಾಗಿದ್ದಾಗ ಕನ್ನಡ ಭಾಷೆಯಲ್ಲಿ ಹಲವು ಗ್ರಂಥಗಳಾದವು. ಜೈನರ ತರುವಾಯ ಬ್ರಾಹ್ಮಣರೂ ಲಿಂಗವಂತರೂ ಕೆಲಕೆಲವು ಗ್ರಂಥಗಳನ್ನು ಬರೆದರು. ಅವುಗಳಲ್ಲಿ ರಾಜಶೇಖರವಿಲಾಸ, ಜೈಮಿನಿ ಮುಂತಾದ ಸರಸ ಪ್ರಬಂಧಗಳು ಕರ್ನಾಟಕದಲ್ಲೆಲ್ಲ ಮಾನ್ಯವಾಗಿರುವವು.

**ಭಾಷೆ.**

ಕನ್ನಡಿಗರು ಬಹುತರವಾಗಿ ಸಭ್ಯರೂ ಸುಸ್ವಭಾವದವರೂ ಉಂಟು. ಇವರು ಸ್ನೇಹಕ್ಕೆ ಯೋಗ್ಯರು; ಕಪಟಿಗಳಲ್ಲ; ಬಂಧುಬಳಗದವರನ್ನು ವಿಶೇಷ ಹಚ್ಚಿಕೊಳ್ಳುವರು. ಇವರಿಗೆ ದೇವರಲ್ಲಿಯೂ ತಮ್ಮ ಧರ್ಮದವರಲ್ಲಿಯೂ ವಿಶೇಷ ಭಕ್ತಿಯುಂಟು. ಆದರೆ ಇವರಲ್ಲಿ ಉದ್ಯೋಗವೂ ದೀರ್ಘಪ್ರಯತ್ನವೂ ಬಹು ಕಡಿಮೆ. ಇವರಲ್ಲಿ ಅಹಂಕಾರ ವಿಶೇಷ, ಡಾಂಭಿಕತನದ ಮೇಲೆ ಪ್ರೀತಿ ಹೆಚ್ಚು. ಇವರು ಶೀಘ್ರಕೋಪಿಗಳು; ಆದರೆ ದೀರ್ಘದ್ವೇಷಿಗಳಲ್ಲ.

**ಸ್ವಭಾವ.**

## ೪ನೇ ಪ್ರಕರಣ.

## ಕರ್ನಾಟಕದ ರಾಜಕೀಯ ವಿಭಾಗಗಳು ಹಾಗು ರಾಜ್ಯಪದ್ಧತಿ.

ಕರ್ನಾಟಕದ ರಾಜಕೀಯ ವಿಭಾಗಗಳಲ್ಲಿ ಸದ್ಯಕ್ಕೆ ಇಂಗ್ಲಿಷರ ರಾಜ್ಯಕ್ಕೆ ಸೇರಿದ ಸೀಮೆಯಲ್ಲಿ ವಿಜಾಪುರ, ಬೆಳಗಾವಿ, ಧಾರವಾಡ, ಕಾರವಾರ (ಉತ್ತರಕಾನಡಾ), ಮಂಗಳೂರು (ದಕ್ಷಿಣಕಾನಡಾ), ನೀಲಗಿರಿ, ಬಳ್ಳಾರಿ ಎಂಬಿವೇಳು ಜಿಲ್ಲೆಗಳೂ ಕೊಡಗಪ್ರಾಂತವೂ ಇರುತ್ತವೆ. ಇವುಗಳಲ್ಲಿ ಮೊದಲಿನ ನಾಲ್ಕು ಮುಂಬಯಿ ಇಲಾಖೆಗೆ, ಕಡೆಯ ಮೂರು ಮದ್ರಾಸ ಇಲಾಖೆಗೆ ಸೇರಿರುತ್ತವೆ. ವಿಜಾಪುರ, ಬೆಳಗಾವಿ, ಧಾರವಾಡ, ಈ ಮೂರು ಜಿಲ್ಲೆಗಳಿಗೆ ಕೂಡಿ ದಕ್ಷಿಣಮಹಾರಾಷ್ಟ್ರವೆಂದೆನ್ನುತ್ತಾರೆ; ಯಾಕಂದರೆ ಪೂರ್ವದಲ್ಲಿ ಪುಣೆಯಲ್ಲಿ ಆಳಿದ ಪೇಶವೆಯರೆಂಬ ಮಹಾರಾಷ್ಟ್ರರ ರಾಜ್ಯಕ್ಕೆ ಈ ಜಿಲ್ಲೆಗಳು ಸೇರಿದ್ದವು.

**ರಾಜಕೀಯ ವಿಭಾಗಗಳು.**

**ವಿಜಾಪುರ ಜಿಲ್ಲೆಯ** ಉತ್ತರಕ್ಕೆ ಭೀಮಾನದಿ, ಪೂರ್ವಕ್ಕೆ ನಿಜಾಮನ ರಾಜ್ಯ, ದಕ್ಷಿಣಕ್ಕೆ ಧಾರವಾಡ ಜಿಲ್ಲೆ, ಪಶ್ಚಿಮಕ್ಕೆ ಬೆಳಗಾವಿ ಸಾತಾರೆ ಜಿಲ್ಲೆಗಳುಂಟು. ಇದರ ಕ್ಷೇತ್ರಫಲ ಸುಮಾರು ೫,೭೫೭ ಚಚ್ಚೌಕುಮೈಲು, ಜನಸಂಖ್ಯೆ ಸುಮಾರು ೯ ಲಕ್ಷ ಉಂಟು. ಈ ಜಿಲ್ಲೆಯು ಬೈಲುಸೀಮೆಯ ಭಾಗವು. ಇದರೊಳಗಿಂದ ಭೀಮಾ, ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಈ ನದಿಗಳು ಹರಿಯುತ್ತವೆ. ಇದರಲ್ಲಿ ೮ ತಾಲೂಕುಗಳುಂಟು. ಈ ಜಿಲ್ಲೆಯ ಮುಖ್ಯಸ್ಥಳ **ವಿಜಾಪುರವು.** ಇದು ಮೊದಲು **ಆದಿಲಶಾಹೀ** ರಾಜವಂಶದವರ ರಾಜಧಾನಿ ಇತ್ತು. ಅಲ್ಲಿ ಈಗಲೂ ಒಂದು ಹಳೇ ನೆಲಕೋಟೆಯೂ ಎಷ್ಟೋ ಪ್ರಾಚೀನ ದೊಡ್ಡ ದೊಡ್ಡ ಇಮಾರತುಗಳೂ ಅವೆ. **ಬಾಗಲಕೋಟೆಯಲ್ಲಿ** ಚಲೋ ಕಂಬಳಿಗಳೂ ವಸ್ತ್ರಗಳೂ ಹುಟ್ಟುತ್ತವೆ. **ತಾಳೀಕೋಟೆಯಲ್ಲಿ** ಒಂದು ಭದ್ರವಾದ ನೆಲಗೋಟೆಯುಂಟು. **ಬಾದಾಮಿಯಲ್ಲಿಯೂ** ಒಂದು ನೋಡತಕ್ಕ ದುರ್ಗವದೆ. ಅದರ ಸಮೀಪದಲ್ಲಿ **ಮಹಾಕೂಟೇಶ್ವರ,** ಬನಶಂಕರಿ ಎಂಬ ಪ್ರಸಿದ್ಧ ದೇವಸ್ಥಾನಗಳುಂಟು. **ಐಹೊಳೆಯಲ್ಲಿ** ನೂರಾರು ಪುರಾತನದ ಕಲ್ಲಿನ ಗುಡಿಗಳುಂಟು.

ಬೆಳಗಾವೀ ಜಿಲ್ಹೆಯ ಉತ್ತರಕ್ಕೆ ಕೊಲ್ಹಾಪುರ, ಸಾಂಗಲಿ, ಮಿರ್ಜೆ ಸಂಸ್ಥಾನಗಳು; ಪೂರ್ವಕ್ಕೆ ರಾಮದುರ್ಗ, ಜಮಖಂಡಿ, ಮುಧೋಳ ಸಂಸ್ಥಾನಗಳು, ವಿಜಾಪುರ ಜಿಲ್ಹೆ; ದಕ್ಷಿಣಕ್ಕೆ ಕಾರವಾರ ಧಾರವಾಡ ಜಿಲ್ಹೆಗಳು; ಪಶ್ಚಿಮಕ್ಕೆ ಗೋವೆಯ ಸೀಮೆ, ಸಾವಂತವಾಡೀ ಅಥವಾ ಸುಂದರವಾಡೀ ಸಂಸ್ಥಾನ. ಇದರ ಕ್ಷೇತ್ರಫಲ ೪,೬೫೮ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೧೦ ಲಕ್ಷ ಉಂಟು. ಈ ಜಿಲ್ಹೆಯ ಪಶ್ಚಿಮಭಾಗ ಮಲೆನಾಡು; ಪೂರ್ವಭಾಗ ಬೈಲುಂಟು. ಇದರಲ್ಲಿ ಚಿಕ್ಕೋಡೀ ಗುಡ್ಡ, ಎಲ್ಲಮ್ಮನ ಗುಡ್ಡ, ಗೋಕಾವೀ ಗುಡ್ಡ ಮುಂತಾದ ಕೆಲವು ಸಣ್ಣ ಗುಡ್ಡಗಳುಂಟು. ಇದರೊಳಗಿಂದ ಕೃಷ್ಣಾ-ಘಟಪ್ರಭಾ-ಮಲಪ್ರಭಾ ನದಿಗಳು ಹರಿಯುತ್ತವೆ. ಇದರಲ್ಲಿ ೮ ತಾಲೂಕುಗಳುಂಟು. ಈ ಜಿಲ್ಹೆಯ ಮುಖ್ಯಸ್ಥಳ **ಬೆಳಗಾವಿ.** ಅಲ್ಲಿ ಒಂದು ಭದ್ರವಾದ ಪ್ರಾಚೀನ ನೆಲಕೋಟೆಯುಂಟು. ಚಾಲುಕ್ಯರ ಕಾಲದಲ್ಲಿ **ಹಲಸಿಗೆ**ಯಲ್ಲಿ ಕದಂಬರು, **ಸವದತ್ತಿ**ಯಲ್ಲಿ ರಟ್ಟರು ಎಂಬ ಮಾಂಡಲಿಕ ಅರಸರು ಆಳುತ್ತಿದ್ದರು. ಸವದತ್ತಿಯ ನೆರೆಯ ಗುಡ್ಡದ ಮೇಲೆ ಎಲ್ಲಮ್ಮನ ದೇವಸ್ಥಾನವದೆ. **ಸಂಕೇಶ್ವರ**ದಲ್ಲಿ ಶಂಕರಾಚಾರ್ಯರ ಮಠವದೆ. **ಅಥಣಿ**ಯು ದೊಡ್ಡ ಪಡಮೂಲೆಯ ಸ್ಥಳವು. **ನಿಪ್ಪಾಣಿ, ಕಿತ್ತೂರು** ಮೊದಲು ಪ್ರಸಿದ್ಧ ದೇಸಾಯಿಗಳ ಸಂಸ್ಥಾನಗಳಿದ್ದವು.

ಧಾರವಾಡ ಜಿಲ್ಹೆಯ ಉತ್ತರಕ್ಕೆ ಬೆಳಗಾವಿ-ವಿಜಾಪುರ ಜಿಲ್ಹೆಗಳು; ಪೂರ್ವಕ್ಕೆ ನಿಜಾಮನ ರಾಜ್ಯ; ದಕ್ಷಿಣಕ್ಕೆ ಮೈಸೂರ ಸೀಮೆ; ಪಶ್ಚಿಮಕ್ಕೆ ಕಾರವಾರ ಜಿಲ್ಹೆ. ಇದರ ಕ್ಷೇತ್ರಫಲವು ಸುಮಾರು ೪,೫೬೪ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೧೦ ಲಕ್ಷ ಉಂಟು. ಈ ಜಿಲ್ಹೆಯ ಪಶ್ಚಿಮದ ಭಾಗ ಮಲೆನಾಡು, ಉಳಿದದ್ದೆಲ್ಲ ಬೆಳವಲು. ಇದರಲ್ಲಿ ಮಲಾಪಹಾರಿ, ವರದಾ, ಕುಮದ್ವತಿ ಎಂಬವೇ ಮುಖ್ಯ ನದಿಗಳು. ತುಂಗಭದ್ರಾನದಿಯು ಈ ಜಿಲ್ಹೆಯ ಆಗ್ನೇಯ ಮೇರೆಗುಂಟ ಹರಿಯುತ್ತದೆ. ಇದರಲ್ಲಿ ಕಪ್ಪತ ಗುಡ್ಡ, ಮೈಲಾರಲಿಂಗನ ಗುಡ್ಡ, ನರಗುಂದದ ಗುಡ್ಡ ಮುಂತಾದ ಕೆಲವು ಗುಡ್ಡಗಳುಂಟು. ಈ ಜಿಲ್ಹೆಯಲ್ಲಿ ಹನ್ನೊಂದು ತಾಲೂಕುಗಳು. ಜಿಲ್ಲೆಯ ಮುಖ್ಯಸ್ಥಳ **ಧಾರವಾಡ.** ಇಲ್ಲಿ ಒಂದು ಭದ್ರವಾದ ನೆಲಕೋಟೆಯು ಇತ್ತು. ಆದರೆ ಅದನ್ನು ಇಂಗ್ಲಿಷ ಸರಕಾರದವರು ೧೮೫೭ನೇ ವರ್ಷದ ಬಂಡಾಯವಾದ ಮೇಲೆ ಕೆಡವಿಸಿದರು. **ಹುಬ್ಬಳ್ಳಿ**ಯು ಉತ್ತರ ಕರ್ನಾಟಕಕ್ಕೆಲ್ಲ ದೊಡ್ಡ ಪೇಟೆಯ ಸ್ಥಳವು. ಅಲ್ಲಿ

ಜಲೋ ಜವಳಿಗಳೂ ತಾಮ್ರ-ಹಿತ್ತಾಳಿಗಳ ಪಾತ್ರೆಗಳೂ ಹುಟ್ಟುತ್ತವೆ. ಗದಗು-ಬೆಟಿಗೇರಿಗಳಲ್ಲಿಯೂ ಜವಳಿಗಳಾಗುತ್ತವೆ. ಗದಗಿನ ವೀರನಾರಾಯಣನ ದೇವಸ್ಥಾನವು ಬಹಳ ಪ್ರಸಿದ್ಧವದೆ. ಅಲ್ಲಿ ಹಿಂದಕ್ಕೆ ಕುಮಾರವ್ಯಾಸನೆಂಬ ಕವಿಯು ಕನ್ನಡ ಭಾರತವನ್ನು ರಚಿಸಿದನು. ದ್ವಾರಸಮುದ್ರದ ಬಲ್ಲಾಳರಾಯನ ಕಾಲದಲ್ಲಿ ಲಕ್ಕುಂಡಿಯೂ ಬಂಕಾಪುರವೂ ಕೆಲವು ದಿವಸ ರಾಜಧಾನಿಗಳಾಗಿದ್ದವು. ಹಾನಗಲ್ಲು ಮೊದಲು ವಿರಾಟನ ರಾಜಧಾನಿ ಇತ್ತೆಂದು ಹೇಳುತ್ತಾರೆ. ನರಗುಂದವು ೧೮೫೮ಕ್ಕೆ ಮೊದಲು ಒಂದು ಸಣ್ಣ ಸಂಸ್ಥಾನವಿತ್ತು. ಸವಣೂರ ನಬಾಬನು ಈ ದೇಶದ ಇತಿಹಾಸದಲ್ಲಿ ಬಹಳ ಹೆಸರಾದವನು.

ಕಾರವಾರ ಜಿಲ್ಹೆಯ ಉತ್ತರಕ್ಕೆ ಗೋವೆಯ ಸೀಮೆ; ಪೂರ್ವಕ್ಕೆ ಧಾರವಾಡ ಜಿಲ್ಹೆ, ಹಾಗು ಮೈಸೂರ ಸೀಮೆ; ಪಶ್ಚಿಮಕ್ಕೆ ಅರಬೀ ಸಮುದ್ರ; ದಕ್ಷಿಣಕ್ಕೆ ಮಂಗಳೂರ ಜಿಲ್ಹೆ. ಇದರ ಕ್ಷೇತ್ರಫಲ ಸುಮಾರು ೩,೯೧೦ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೪ ಲಕ್ಷ ಉಂಟು. ಈ ಜಿಲ್ಹೆಯಲ್ಲಿ ಘಟ್ಟದ ಮೇಲೆ ೪, ಘಟ್ಟದ ಕೆಳಗೆ ೪, ಹೀಗೆ ೮ ತಾಲೂಕುಗಳುಂಟು. ಘಟ್ಟದ ಮೇಲಿನ ಭಾಗದಲ್ಲಿ ದಟ್ಟನ್ನ ಹಳುವುಗಳು ಬಹಳ. ಹವೆಯು ಬಹು ಕೆಟ್ಟದ್ದುಂಟು. ಚಳಿಜ್ವರ ಬಹಳ. ಘಟ್ಟದ ಕೆಳಗಿನ ಸೀಮೆಯ ಹವೆಯು ಬಹು ಉಷ್ಣವಿದ್ದಾಗ್ಯೂ ತಕ್ಕಮಟ್ಟಿಗೆ ಆರೋಗ್ಯಕರವಾಗಿದೆ. ಈ ಜಿಲ್ಹೆಯ ಮುಖ್ಯ ಸ್ಥಳವಾದ ಕಾರವಾರವು ಮುಂಬಯಿ-ಕರಾಚಿ-ಬಂದರಗಳ ತರುವಾಯ ದೊಡ್ಡ ಬಂದರವು. ಗೋಕರ್ಣವೆಂಬ ಪ್ರಖ್ಯಾತ ಕ್ಷೇತ್ರವು ಸಮುದ್ರತೀರಕ್ಕೆ ಉಂಟು. ಬನವಾಸಿಯು ಮೊದಲು ಕದಂಬರಾಜರ ರಾಜಧಾನಿಯಿತ್ತು. ಸ್ವಾದಿಯು ವಿಜಯನಗರದ ಅರಸರ ತರುವಾಯ ಒಂದು ಸಂಸ್ಥಾನವಿತ್ತು. ಅಲ್ಲಿ ವಾದಿರಾಜಸ್ವಾಮಿಗಳ ವೃಂದಾವನವು ಉಂಟು. ಆದದರಿಂದ ವೈಷ್ಣವರು ಆ ಸ್ಥಳಕ್ಕೆ ಹೋಗುವದು ಬಹಳ. ಘಟ್ಟದ ಮೇಲೆ ಸಿದ್ದಾಪುರ, ಸಿರಸಿ ಮುಂತಾದ ಕೆಲವು ಸ್ಥಳಗಳಲ್ಲಿ ಶ್ರೀಗಂಧದ ಬೀಸಣಿಕೆ, ಗೊಂಬೆ, ಕರಡಿಗೆ, ಬಡಿಗೆ ಮುಂತಾದ ಚಿತ್ರಗಳನ್ನು ಕೊರೆದ ತರತರದ ಕೈಗಾರಿಕೆಯ ಒಡವೆಗಳು ಆಗುತ್ತವೆ. ಸುಪೆಯ ಹತ್ತರ ಉಳವಿ ಎಂಬ ಸ್ಥಳವು ಲಿಂಗವಂತರ ಕ್ಷೇತ್ರವದೆ. ಗೆರಸಪ್ಪೆಯ ತಡಸಲವು ನೋಡತಕ್ಕಂಥಾದ್ದುಂಟು. ಘಟ್ಟದ ಮೇಲೆ ಹಲ್ಯಾಳ, ಸುಪೆ, ಮುಂಡಗೋಡ, ಎಲ್ಲಾಪುರ ಮುಂತಾದ ಕಡೆಯಲ್ಲಿ ಬಹಳ ರೋಗಕಾರಕವಾದ ಹವೆಯುಂಟು.

ಮಂಗಳೂರ ಜಿಲ್ಹೆಯ ಉತ್ತರಕ್ಕೆ ಕಾರವಾರ ಜಿಲ್ಹೆ, ಪೂರ್ವಕ್ಕೆ ಸಹ್ಯಾದ್ರಿಯ ಸಾಲು, ದಕ್ಷಿಣಕ್ಕೆ ಮಲಿಯಾಳ ಜಿಲ್ಹೆ, ಪಶ್ಚಿಮಕ್ಕೆ ಅರಬೀ ಸಮುದ್ರ ಉಂಟು. ಇದರ ಕ್ಷೇತ್ರಫಲ ಸುಮಾರು ೪,೨೦೫ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೧೦ ಲಕ್ಷ ಉಂಟು. ಜಿಲ್ಹೆಯ ಮುಖ್ಯಸ್ಥಳ ಮಂಗಳೂರು. ಮಂಗಳೂರ ಉತ್ತರಕ್ಕೆ ಸಮುದ್ರದ ದಂಡೆಗಿದ್ದ ಉಡಿಪಿಯು ಮಧ್ವಾಚಾರ್ಯರ ವಾಸಸ್ಥಾನವು. ಇದು ದೊಡ್ಡ ಕ್ಷೇತ್ರವೆನಿಸುವದು. ಈ ಜಿಲ್ಹೆಯಲ್ಲಿ ತುಳುವು ಭಾಷೆಯೂ ನಡೆಯುತ್ತದೆ.

ನೀಲಗಿರೀ ಜಿಲ್ಹೆಯ ಉತ್ತರಕ್ಕೆ ಮೈಸೂರ ಸೀಮೆ, ಪೂರ್ವಕ್ಕೂ ದಕ್ಷಿಣಕ್ಕೂ ಕೊಯಿಮುತ್ತೂರ ಜಿಲ್ಹೆ, ಪಶ್ಚಿಮಕ್ಕೆ ಮಲಿಯಾಳ ಜಿಲ್ಹೆಗಳುಂಟು. ಇದರ ಕ್ಷೇತ್ರಫಲ ಸುಮಾರು ೪೨೦ ಚಚ್ಚೌಕು ಮೈಲು, ಜನಸಂಖ್ಯೆ ೨೫ ಸಾವಿರದೊಳಗೇ ಉಂಟು. ಈ ಪ್ರದೇಶವು ೩,೦೦೦ದಿಂದ ೬,೦೦೦ ಫೂಟುಗಳ ತನಕ ಎತ್ತರವಾದ ತಪ್ಪಲವದೆ. ಇಲ್ಲಿ ಕೆಲಕೆಲವು ಹಳುವುಗಳಿದ್ದಾಗ್ಯೂ ಇಲ್ಲಿಯ ಹವೆಯು ಬಹಳ ಆರೋಗ್ಯಕರವದೆ. ಈ ಜಿಲ್ಹೆಯ ಮುಖ್ಯಸ್ಥಳ ಉಟಕಮಂಡು (ಉದಕಮಂಡಲ); ಇಲ್ಲಿ ಮದ್ರಾಸದ ಗವ್ಹರ್ನರನು ಬೇಸಿಗೆಯ ಕಾಲದಲ್ಲಿ ಇರುತ್ತಾನೆ. ಈ ಪ್ರದೇಶದಲ್ಲಿ ತೊದ, ಬಡಗ, ಕೋತ, ಕುರುಂಬ ಮುಂತಾದ ಕೆಲವು ಕುಲದವರು ವಾಸಮಾಡುತ್ತಾರೆ. ಅವರಾಡುವ ಮಾತು ಕನ್ನಡ ಭಾಷೆಯನ್ನು ಹೋಲುವದಾಗಿರುತ್ತದೆ.

ಬಳ್ಳಾರೀ ಜಿಲ್ಹೆಯ ಉತ್ತರಕ್ಕೆ ನಿಜಾಮನ ರಾಜ್ಯ; ಪೂರ್ವಕ್ಕೆ ಕಡಪೆ-ಕರ್ನೂಲು ಜಿಲ್ಹೆಗಳು; ದಕ್ಷಿಣಕ್ಕೆ ಮೈಸೂರ ಸೀಮೆ; ಪಶ್ಚಿಮಕ್ಕೆ ಧಾರವಾಡ ಜಿಲ್ಹೆ. ಇದರ ಕ್ಷೇತ್ರಫಲ ಸುಮಾರು ೧೧,೪೯೬ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೧೬⅔ ಲಕ್ಷ ಉಂಟು; ಈ ಜಿಲ್ಹೆಯಲ್ಲಿ ಅಲ್ಲಲ್ಲಿಗೆ ಗುಡ್ಡಗಳುಂಟು; ಮತ್ತು ಹಲವು ದೊಡ್ಡದೊಡ್ಡ ಕೆರೆಗಳುಂಟು. ಇಲ್ಲಿ ಕೆಲವು ಕಡೆಯಲ್ಲಿ ಕಬ್ಬಿಣ, ತಾಮ್ರ, ಸೀಸ ಮುಂತಾದ ಧಾತುಗಳು ದೊರೆಯುತ್ತವೆ. ಆದವಾನಿ, ತಾಡಪತ್ರಿ, ಪದಟೂರು ಮುಂತಾದ ಸ್ಥಳಗಳಲ್ಲಿ ಜವಳಿಗಳು ಆಗುತ್ತವೆ. ಈ ಜಿಲ್ಹೆಯಲ್ಲಿ ೧೩ ತಾಲೂಕುಗಳುಂಟು. ಜಿಲ್ಹೆಯ ಮುಖ್ಯಸ್ಥಳ ಬಳ್ಳಾರಿ; ಮುಂಬಯಿಯಿಂದ ಮದ್ರಾಸಕ್ಕೆ ಹೋಗುವ ಲೋಹಮಾರ್ಗದ್ದೊಂದು ಶಾಖೆಯು ಈ ಪಟ್ಟಣಕ್ಕೆ ಹೋಗಿರುತ್ತದೆ. ತುಂಗಭದ್ರೆಯ ದಕ್ಷಿಣತೀರದಲ್ಲಿದ್ದ ಹಂಪೆಯಲ್ಲಿ ವಿರೂಪಾಕ್ಷನ ಪ್ರಖ್ಯಾತ ದೇವಸ್ಥಾನವದೆ. ಅದರ

ನೆರೆಯಲ್ಲಿ ವಿಜಯನಗರವೆಂಬ ಪ್ರಾಚೀನ ರಾಜಧಾನಿಯು ಹಾಳುಬಿದ್ದಿರುತ್ತದೆ. ಸೊಂಡೂರ ಗುಡ್ಡದ ಮೇಲೆ ಕಾರ್ತಿಕಸ್ವಾಮಿಯ ದೇವಸ್ಥಾನವುಂಟು. ಈ ಜಿಲ್ಲೆಯ ಪೂರ್ವದ ಅರ್ಧಭಾಗದಲ್ಲಿ ತೆಲಗುಭಾಷೆಯು ನಡೆಯುತ್ತದೆ.

ನಿಜಾಮನ ರಾಜ್ಯಕ್ಕೆ ಸೇರಿದ ಭಾಗದ ಉತ್ತರಕ್ಕೆ ಮಾಂಜರಾ (ಮಂಜೀರ) ನದಿ; ಪೂರ್ವಕ್ಕೆ ನಿಜಾಮನ ತೆಲಗು ಸೀಮೆ; ದಕ್ಷಿಣಕ್ಕೆ ಬಳ್ಳಾರಿಯ ಜಿಲ್ಲೆ: ಪಶ್ಚಿಮಕ್ಕೆ ಧಾರವಾಡ-ವಿಜಾಪುರ-ಸೊಲ್ಲಾಪುರ ಜಿಲ್ಲೆಗಳು. ಈ ಭಾಗವು ದಕ್ಷಿಣೋತ್ತರ ೨೪೦ ಮೈಲು, ಪೂರ್ವಪಶ್ಚಿಮ ೧೧೦ ಮೈಲು ಉಂಟು. ಇದರ ಕ್ಷೇತ್ರಫಲ ಸುಮಾರು ೨೦,೦೦೦ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೨೦ ಲಕ್ಷ ಉಂಟು. ಈ ಪ್ರದೇಶವೆಲ್ಲ ಬೈಲುಸೀಮೆ; ಇದರಲ್ಲಿ ಗುಡ್ಡಗಳೂ ಹಳುವುಗಳೂ ಇಲ್ಲವೇ ಇಲ್ಲ. ಭೂಮಿಯು ಕಸುವುಳ್ಳದ್ದದೆ. ಇದರೊಳಗಿಂದ ಭೀಮಾ, ಕೃಷ್ಣಾ ಮೊದಲಾದ ನದಿಗಳು ಹರಿಯುತ್ತವೆ. ತುಂಗಭದ್ರೆಯು ದಕ್ಷಿಣಮೇರೆಯಾಗಿದೆ. ಈ ಭಾಗದಲ್ಲಿ ಬೇದರ (ಬೀದರ), ಕಲಬುರ್ಗೆ, ಮಳಖೇಡ, ಸುರಪುರ, ರಾಯಚೂರು, ಮುದಗಲ್ಲು ಎಂಬ ಆರು ಜಿಲ್ಲೆಗಳುಂಟು. ಬೇದರ, ಕಲಬುರ್ಗೆ, ಇವು ಮೊದಲು ಬಾಮನೀ ವಂಶದ ಬಾದಶಹರ ರಾಜಧಾನಿಗಳಾಗಿದ್ದವು. ಬೇದರದಲ್ಲಿ ಈಗಲೂ ಬೆಳ್ಳಿಬಂಗಾರದ ಮೊಲಾಮಿನ ಸಾಮಾನುಗಳು ಆಗುತ್ತವೆ. ಬೇದರದ ಪಶ್ಚಿಮಕ್ಕೆ ಕಲ್ಯಾಣವು ಮೊದಲು ಚಾಲುಕ್ಯರ ರಾಜಧಾನಿಯಿತ್ತು. ಕಲಬುರ್ಗೆಯಲ್ಲಿ ಈಗಲೂ ಪುರಾತನ ಕಾಲದ ಹಲವು ನೋಡತಕ್ಕಂಥ ಇಮಾರತುಗಳು ಉಂಟು. ತುಂಗಭದ್ರೆಯ ಉತ್ತರತೀರದಲ್ಲಿ ವಿಜಯನಗರದ ಹಾಳುಬೀದಿಯ ಎದುರಿಗೆ ಆನೆಗುಂದಿ ಎಂಬ ಹಾಳುಪಟ್ಟಣವು ಬುನಾದಿಯಲ್ಲಿ ದೊಡ್ಡ ರಾಜಧಾನಿಯಿತ್ತು. ಕೃಷ್ಣಾನದಿಯ ತೀರದಲ್ಲಿ ರಾಯಚೂರು ದೊಡ್ಡ ವ್ಯಾಪಾರ ಸ್ಥಳವು.

ಮುಂಬಯಿಯಿಂದ ಮದ್ರಾಸಕ್ಕೆ ಹೋಗುವ ಉಗಿಬಂಡಿಯ ಮಾರ್ಗವು ಸೊಲ್ಲಾಪುರ-ಕಲಬುರ್ಗೆ-ರಾಯಚೂರುಗಳ ಮೇಲಿಂದ ಹೋಗಿದೆ. ಈ ದೊಡ್ಡ ಮಾರ್ಗದಿಂದ ಹೈದರಾಬಾದ, ಬಳ್ಳಾರಿ, ಬೆಂಗಳೂರುಗಳಿಗೆ ಶಾಖೆಗಳು ಹೋಗಿರುತ್ತವೆ. ಹುಬ್ಬಳ್ಳಿಯಿಂದ ಒಂದು ಮಾರ್ಗವು ಪಶ್ಚಿಮಕ್ಕೆ ಮಾರ್ಮುಗಾವ ಎಂಬ (ಪಂಜಿಮದ ಹತ್ತರ) ಬಂದರದ ವರೆಗೂ, ಪೂರ್ವಕ್ಕೆ ಗದಗಿನ

ವರೆಗೂ ಹೋಗಿರುತ್ತದೆ. ಗದಗಿನಿಂದ ಉತ್ತರಕ್ಕೆ ವಿಜಾಪುರದ ಮೇಲಿಂದ ಸೊಲ್ಲಾಪುರಕ್ಕೆ ಒಂದು ಮಾರ್ಗವಾಗಿರುತ್ತದೆ; ಮತ್ತು ಗದಗಿನಿಂದ ಬಳ್ಳಾರಿಯ ವರೆಗೆ ಮತ್ತೊಂದು ಮಾರ್ಗವು ಹೋಗಿರುತ್ತದೆ. ಇನ್ನೊಂದು ಮಾರ್ಗವು ಪುಣೆಯಿಂದ ಸಾತಾರೆ-ಕೊಲ್ಲಾಪುರ-ಬೆಳಗಾವಿ-ಧಾರವಾಡಗಳ ಮೇಲಿಂದ ಹುಬ್ಬಳ್ಳಿಗೆ ಹೋಗಿರುತ್ತದೆ.

ಮೈಸೂರ ಸಂಸ್ಥಾನದ ಉತ್ತರಕ್ಕೆ ಧಾರವಾಡ-ಬಳ್ಳಾರೀ ಜಿಲ್ಹೆಗಳು; ಪೂರ್ವಕ್ಕೆ ಕಡಪೆ-ಆರ್ಕಾಡು-ಶಾಲ್ಯಮು ಜಿಲ್ಹೆಗಳು; ದಕ್ಷಿಣಕ್ಕೆ ನೀಲಗಿರಿ-ಮಲಿಯಾಳ ಜಿಲ್ಹೆಗಳು; ಪಶ್ಚಿಮಕ್ಕೆ ಕೊಡಗನಾಡು, ಮಂಗಳೂರು ಜಿಲ್ಹೆಯು. ಈ ಸಂಸ್ಥಾನವು ದಕ್ಷಿಣೋತ್ತರ ೨೫೦ ಮೈಲು, ಪೂರ್ವಪಶ್ಚಿಮ ೨೯೦ ಮೈಲು ಉಂಟು. ಇದರ ಕ್ಷೇತ್ರಫಲ ಸುಮಾರು ೨೮,೪೪೯ ಚಚ್ಚೌಕು ಮೈಲು, ಜನ ಸಂಖ್ಯೆ ೫೦ ಲಕ್ಷ ಉಂಟು. ಈ ಸೀಮೆಯು ೩೦೦೦ ಫೂಟು ಎತ್ತರದ ವಿಸ್ತೀರ್ಣವಾದ ತಪ್ಪಲದೆ. ಈ ತಪ್ಪಲು ಪೂರ್ವಕ್ಕೂ ಉತ್ತರಕ್ಕೂ ಇಳುಕ ಲಾಗಿದೆ. ಇದರಲ್ಲಿ ಅಲ್ಲಲ್ಲಿಗೆ ಗುಡ್ಡಗಳೂ ಹಳುವುಗಳೂ ಉಂಟು. ಇದರಲ್ಲಿ ಕಾವೇರಿ, ಅರ್ಕಾವತಿ, ಸುವರ್ಣರೇಖಾ, ಪೆನ್ನಾರು, ಪಾಲಾರು ಮುಂತಾದ ಮುಖ್ಯ ನದಿಗಳುಂಟು. ಮೈಸೂರ ಸೀಮೆಯಲ್ಲಿ ನಂದಿದುರ್ಗ, ಅಷ್ಟ ಗ್ರಾಮ (ಮೈಸೂರ), ನಗರ (ಬೆದನೂರು) ಎಂಬ ಮೂರು ಮುಖ್ಯ ಭಾಗ ಗಳು; ಈ ಮೂರು ಭಾಗಗಳು ಕೂಡಿ ೮ ಜಿಲ್ಹೆಗಳುಂಟು. ಮಹಾರಾಜನು ಮೈಸೂರಲ್ಲಿ ಇರುತ್ತಾನೆ. ಮೈಸೂರಿಂದ ೧೨ ಮೈಲು ಉತ್ತರಕ್ಕೆ ಶ್ರೀರಂಗ ಪಟ್ಟಣವದೆ; ಇದು ಮೊದಲು ಹೈದರ, ಟೀಪು, ಇವರ ರಾಜಧಾನಿ ಇತ್ತು. ಹಳೇಬೀಡು (ದ್ವಾರಸಮುದ್ರ) ಮೊದಲು ಬಲ್ಲಾಳ ವಂಶದ ಅರಸರ ರಾಜ ಧಾನಿ ಇತ್ತು. ಬೆಂಗಳೂರ ಈಶಾನ್ಯಕ್ಕೆ ದೇವನಹಳ್ಳಿಯು ಹೈದರನ ಜನ್ಮ ಭೂಮಿಯು. ನಂದಿದುರ್ಗ, ಚಿತ್ರಕಲ್ಲದುರ್ಗ ಎಂಬೆರಡು ಪ್ರಸಿದ್ಧದುರ್ಗ ಗಳವೆ. ಎಳಂದೂರಲ್ಲಿ ಕನ್ನಡ ರಾಜಶೇಖರಕಾರನಾದ ಷಡಕ್ಷರಿಯು ಹುಟ್ಟಿದನು. ನಗರವು ಹಿಂದಕ್ಕೆ ವಿಜಯನಗರಕ್ಕೆ ಮಾಂಡಲಿಕರಾದ ಲಿಂಗ ವಂತ ಅರಸರ ಸಂಸ್ಥಾನದ ರಾಜಧಾನಿ ಇತ್ತು. ಈ ಭಾಗದಲ್ಲಿ ಅನಂತಶಯನ ವೆಂಬ ಬ್ರಾಹ್ಮಣರ ದೇವಸ್ಥಾನವೂ ಮೇಲುಕೋಟೆ ಎಂಬ ಜೈನರ ಪ್ರಸಿದ್ಧ ದೇವಸ್ಥಾನವೂ ಉಂಟು. ಶ್ರಿಂಗೇರಿಯ ಹತ್ತರ ಕಳಸವೆಂಬ ಗ್ರಾಮದಲ್ಲಿ ಶಂಕರಾಚಾರ್ಯರು ಹುಟ್ಟಿದರು.

ಕೊಡಗು ಎಂಬ ಗುಡ್ಡಗಾಡು ಸೀಮೆಯು ಮೈಸೂರ ಸಂಸ್ಥಾನದ ನೈಋತ್ಯಕ್ಕೆ ಉಂಟು. ಈ ಸೀಮೆ ೩,೦೦೦ದಿಂದ ೪,೫೦೦ ಫೂಟು ಎತ್ತರವಾದ ತಪ್ಪಲು. ಇಲ್ಲಿಯ ದಟ್ಟನ್ನ ಹಳುವುಗಳಲ್ಲಿ ಶ್ರೀಗಂಧ ತೇಗು ಮೊದಲಾದ ಮರಗಳು ಬಹಳ; ಒಳಗಡೆಯಲ್ಲಿ ಅಡವಿಯನ್ನು ಕಡಿದು ಕಾಫಿಯ ತೋಟಗಳನ್ನು ಎಷ್ಟೋ ಕಡೆಯಲ್ಲಿ ಮಾಡಿದ್ದಾರೆ. ಇಲ್ಲಿ ಕಾಡಾನೆಗಳು ಹಿಂಡುಗಟ್ಟಿ ತಿರುಗಾಡುತ್ತವೆ. ಈ ಸೀಮೆಯಲ್ಲಿ ಮುಖ್ಯವಾಗಿ ನಾಯರ ಕುಲದ ದ್ರವಿಡರ ವಸ್ತಿಯುಂಟು. ಈ ಸೀಮೆಯ ಮುಖ್ಯಸ್ಥಳ ಮಡಿಕೇರಿ; ಈ ನಾಡನ್ನು ೧೮೩೪ರಲ್ಲಿ ಇಂಗ್ಲಿಷ ಸರಕಾರದವರು ತಮ್ಮ ರಾಜ್ಯಕ್ಕೆ ಸೇರಿಸಿದರು. ಇದರ ಕ್ಷೇತ್ರಫಲ ೨,೪೦೦ ಚಚ್ಚೌಕು ಮೈಲು, ಜನಸಂಖ್ಯೆ ಸುಮಾರು ೨ ಲಕ್ಷ ಉಂಟು.

**ಕರ್ನಾಟಕದ ರಾಜ್ಯಪದ್ಧತಿ.**

ಸಾಂಪ್ರತ ಕಾಲಕ್ಕೆ ಕರ್ನಾಟಕದಲ್ಲಿ ಮೂರು ಸರಕಾರಗಳ ಅಮಲು ನಡೆಯುತ್ತದೆಂದು ಹಿಂದೆ ಹೇಳಿದ್ದೇವೆ. ಇವುಗಳನ್ನು ಇಲ್ಲಿ ಸಂಕ್ಷೇಪದಲ್ಲಿ ವಿವರಿಸುವೆವು. ಇಂಗ್ಲಿಷರ ರಾಜ್ಯಕ್ಕೆ ಸೇರಿದ ಸೀಮೆಯಲ್ಲಿ ವಿಜಾಪುರ, ಬೆಳಗಾವಿ, ಧಾರವಾಡ, ಕಾರವಾರ (ಉತ್ತರ ಕಾನಡಾ), ಮಂಗಳೂರು (ದಕ್ಷಿಣ ಕಾನಡಾ), ನೀಲಗಿರಿ, ಬಳ್ಳಾರಿ ಎಂಬವೇಳು ಜಿಲ್ಹೆಗಳೂ ಕೊಡಗ ಪ್ರಾಂತವೂ ಇರುತ್ತವೆ. ಇವುಗಳಲ್ಲಿ ಮೊದಲಿನ ನಾಲ್ಕು ಮುಂಬಯಿ ಇಲಾಖೆಗೆ, ಕಡೆಯ ಮೂರು ಮದ್ರಾಸ ಇಲಾಖೆಗೆ ಸೇರಿರುತ್ತವೆ. ವಿಜಾಪುರ, ಬೆಳಗಾವಿ, ಧಾರವಾಡ, ಈ ಮೂರು ಜಿಲ್ಹೆಗಳಿಗೆ ಕೂಡಿ ದಕ್ಷಿಣ ಮಹಾರಾಷ್ಟ್ರವೆಂದೆನ್ನುತ್ತಾರೆ; ಯಾಕಂದರೆ ಪೂರ್ವದಲ್ಲಿ ಪುಣೆಯಲ್ಲಿ ಆಳಿದ ಪೇಶವೆಯರೆಂಬ ಮಹಾರಾಷ್ಟ್ರರ ರಾಜ್ಯಕ್ಕೆ ಈ ಜಿಲ್ಹೆಗಳು ಸೇರಿದ್ದವು.

**ರಾಜಕೀಯ ವಿಭಾಗಗಳು.**

ಕಲೆಕ್ಟರನು ಜಿಲ್ಹೆಯ ಮುಖ್ಯ ಅಧಿಕಾರಿಯು. ಬೇರೆ ಬೇರೆ ಖಾತೆಗಳಿಗೆ ಸೇರಿದ ಅಧಿಕಾರಸ್ಥರು ಪ್ರತ್ಯಕ್ಷವಾಗಿ ತಮ್ಮ ತಮ್ಮ ಖಾತೆಗೆ ಸೇರಿದ ವ್ಯವಸ್ಥೆಯ ಕೆಲಸಗಳನ್ನು ಮಾಡುವರು. ಆದರೆ ದಿವಾಣೀ ನ್ಯಾಯಾಧೀಶನ ಹೊರತು ಅವರೆಲ್ಲರ ಮೇಲೆ ಕಲೆಕ್ಟರನ ಅಮಲು ಅಪ್ರತ್ಯಕ್ಷವಾಗಿ ನಡೆಯುವದು. ಯಾಕಂದರೆ ತನ್ನ ಜಿಲ್ಹೆಯೊಳಗೆ ಇರುವ ಎಲ್ಲ ಅಧಿಕಾರಸ್ಥರಿಗೆ ಸಂಬಂಧಿಸಿದ ಯಾವತ್ತು ಕೆಲಸಗಳ ಬಗ್ಗೆ ಕಲೆಕ್ಟರನು ಸರಕಾರಕ್ಕೆ ತಿಳಿಸುತ್ತಿರುವನು. ಕಲೆಕ್ಟರನ ಸಹಾಯಕ್ಕೆ ಒಬ್ಬರು ಅಥವಾ ಇಬ್ಬರು ಅಸಿಸ್ಟಂಟ ಕಲೆಕ್ಟರರೂ, ಒಬ್ಬರು ಅಥವಾ ಇಬ್ಬರು ಡೆಪ್ಯುಟಿ ಕಲೆಕ್ಟ

**ಇಂಗ್ಲಿಷರ ರಾಜ್ಯವ್ಯವಸ್ಥೆ.**

ರರೂ ಇರುವರು. ಇವರ ಹೊರತು ಬೇರೆ ಬೇರೆ ಖಾತೆಗಳ ವ್ಯವಸ್ಥೆಗಾಗಿ ಒಬ್ಬ ಪೋಲೀಸ ಖಾತೆಯ ಅಧಿಕಾರಸ್ಥನೂ (ಡಿಸ್ಟ್ರಿಕ್ಟ ಸುಪರಿಂಟೆಂಡೆಂಟ ಆಫ್ ಪೋಲೀಸ), ಒಬ್ಬ ಎಂಜಿನಿಯರನೂ (ಎಕ್ಸಿಕ್ಯೂಟಿವ ಎಂಜಿನಿಯರ), ಸಿವ್ಹಿಲ್ ಸೆರ್ಜನನೆಂಬ ಒಬ್ಬ ಡಾಕ್ತರನೂ, ಫಾರೆಸ್ಟ (ಜಂಗಲ) ಅಧಿಕಾರಿಯೂ (ಡಿಸ್ಟ್ರಿಕ್ಟ ಫಾರೆಸ್ಟ ಆಫೀಸರ) ಇರುವರು. ಪ್ರತಿಯೊಂದು ಜಿಲ್ಹೆಯಲ್ಲಿ ತಾಲೂಕುಗಳೆಂಬ ಸಣ್ಣ ವಿಭಾಗಗಳಿರುವವು. ಕಲೆಕ್ಟರನು ಒಟ್ಟು ಜಿಲ್ಹೆಯ ಬಗ್ಗೆ ಮಾಡುವ ಕೆಲಸ ವನ್ನು ಮಾಮಲೇದಾರ ಇಲ್ಲವೆ ತಹಶೀಲದಾರನೆಂಬ ಅಧಿಕಾರಿಯು ತಾಲೂಕಿನ ಬಗ್ಗೆ ಮಾಡುವನು. ಕೆಲವು ಹಳ್ಳಿಗಳೂ ಸಣ್ಣ ದೊಡ್ಡ ಊರುಗಳೂ ಕೂಡಿ ತಾಲೂಕು ಆಗುವದು. ಕುಲಕರ್ಣಿ, ಗೌಡ (ಪಾಟೀಲ) ರೆಂಬ ಅಧಿಕಾರಸ್ಥರು ತಮ್ಮ ತಮ್ಮ ಹಳ್ಳಿಯ ವ್ಯವಸ್ಥೆಯ ಬಗ್ಗೆ ಮಾಮಲೇದಾರನಿಗೆ ಜವಾಬುದಾರ ರಿರುವರು. ಕೆಲವು ದೊಡ್ಡ ಊರುಗಳಲ್ಲಿ ಮ್ಯುನಿಸಿಪಾಲಿಟಿಗಳೆಂಬ ಸಭೆಗಳಿರು ವವು. ಇವುಗಳಲ್ಲಿ ಊರವರು ಆರಿಸಿದ ಕೆಲವು ಜನರೂ ಸರಕಾರದವರು ಆ ಊರೊಳಗಿನವರಿಂದಲೇ ಆರಿಸಿ ನೇಮಿಸಿದ ಕೆಲವು ಜನರೂ ಇರುವರು. ಇವರೆಲ್ಲರು ಕೂಡಿ ಆ ಊರಿಗೆ ಸಂಬಂಧಿಸುವ ಊರ ಸುಧಾರಣೆಯ ಎಷ್ಟೋ ಕೆಲಸಗಳನ್ನು ಮಾಡುವರು. ಇದರಂತೆಯೇ ತಾಲೂಕಿನ ಸ್ಥಾನಿಕ ಪ್ರಶ್ನಗಳ ಬಗ್ಗೆ ವ್ಯವಸ್ಥೆಮಾಡಲಿಕ್ಕೆ ತಾಲೂಕ ಬೋರ್ಡುಗಳೆಂಬ ಸಭೆಗಳೂ, ಇಡೀ ಜಿಲ್ಹೆಗೆ ಸಂಬಂಧಿಸುವ ಸುಧಾರಣೆಯ ಕೆಲಸಗಳನ್ನು ಮಾಡಲಿಕ್ಕೆ ಜಿಲ್ಹೆಯ ಸಭೆಗಳೂ ಇರುವವು. ಮದ್ರಾಸ ಇಲಾಖೆಯಲ್ಲಿ ಕೆಲವು ಹಳ್ಳಿಗಳ ಗುಂಪಿಗೆ ಕೂಡಿ ಗ್ರಾಮಪಂಚಾಯತ ಎಂಬ ಸಭೆಯು ಇರುವದು. ಇಂಥ ಸಭೆಗಳು ಮುಂಬಯಿ ಇಲಾಖೆಯಲ್ಲಿ ಇಲ್ಲ. ಕೊಡಗು ಪ್ರಾಂತದ ವ್ಯವಸ್ಥೆಯನ್ನು ಇದೇ ಪದ್ಧತಿಯ ಮೇರೆಗೆ ಮೈಸೂರು ಸಂಸ್ಥಾನದ ರೆಸಿಡೆಂಟನೆಂಬ ಇಂಗ್ಲಿಷ ಅಧಿಕಾರಸ್ಥನು ಮಾಡುವನು.

**ಸಂಸ್ಥಾನಿಕರು.**

ಮೈಸೂರು ಹಾಗು ಹೈದರಾಬಾದ ಇವೆರಡೂ ಸಂಸ್ಥಾನಗಳು ಬ್ರಿಟಿಷರ ಸಂರಕ್ಷಣೆಗೆ ಒಳಪಟ್ಟಿರುವವು. ಹಿಂದುಸ್ಥಾನದಲ್ಲಿರುವ ಇಂಥ ಆಶ್ರಿತ ಸಂಸ್ಥಾ ನಗಳಲ್ಲಿ ಹೈದರಾಬಾದವು ಮೊದಲನೆಯದೂ, ಮೈಸೂರವು ಎರಡನೆಯದೂ ಇರುವವು. ಮೈಸೂರ ಮಹಾ ರಾಜನೂ ನಿಜಾಮನೂ ರೆಸಿಡೆಂಟರೆಂಬ ಇಂಗ್ಲಿಷ ಅಧಿಕಾರಸ್ಥರ ಮುಖಾಂತರ ವಾಗಿ ವರಿಷ್ಠ ಸರಕಾರದವರೊಡನೆ ಪತ್ರವ್ಯವಹಾರ ನಡೆಸುವರು. ಈ ಅಧಿ

ಕಾರಸ್ಥರು ಸಂಸ್ಥಾನಿಕರ ಒಳವ್ಯವಸ್ಥೆಯಲ್ಲಿ ಕೈಹಾಕುವದಿಲ್ಲ; ಆದರೆ ತೋರಿದಾಗ ಆಪ್ತಾಲೋಚನೆಯನ್ನು ಮಾತ್ರ ಹೇಳುವರು. ಈ ಸಂಸ್ಥಾನಗಳಲ್ಲಿ ಜಿಲ್ಹೆಗಳು ತಾಲೂಕುಗಳು ಎಂಬ ಭಾಗಗಳುಂಟು. ಇವುಗಳ ವ್ಯವಸ್ಥೆಯು ಬಹುತರ ಬ್ರಿಟಿಷ ಜಿಲ್ಹೆಗಳ ವ್ಯವಸ್ಥೆಯಂತೆಯೇ ಇರುವದು.

ಈ ದೊಡ್ಡ ಸಂಸ್ಥಾನಗಳಲ್ಲದೆ ಬ್ರಿಟಿಷರ ಅಮಲಿನಲ್ಲಿರುವ ಕರ್ನಾಟಕದಲ್ಲಿ ಸಣ್ಣ ಪುಟ್ಟ ಸಂಸ್ಥಾನಗಳು ಹಲವು ಇರುವವು. ಇವು ಆಯಾ ಇಲಾಖೆಯ ಗವ್ಹರ್ನರರ ಪ್ರತ್ಯಕ್ಷ ಅಮಲಿನಲ್ಲಿರುವವು. ಜಿಲ್ಹೆಯ ಕಲೆಕ್ಟರನು ಈ ಸಣ್ಣ ಸಂಸ್ಥಾನಗಳ ಪೊಲಿಟಿಕಲ್ ಏಜಂಟನಿರುವನು. ರೆಸಿಡೆಂಟನು ದೊಡ್ಡ ಸಂಸ್ಥಾನಗಳ ಬಗ್ಗೆ ಮಾಡುವ ಕೆಲಸವನ್ನೇ ಪೊಲಿಟಿಕಲ್ ಏಜಂಟನು ಈ ಪುಟ್ಟ ಸಂಸ್ಥಾನಗಳ ಬಗ್ಗೆ ಮಾಡುವನು. ಈ ಚಿಕ್ಕ ಸಂಸ್ಥಾನಗಳ ವ್ಯವಸ್ಥೆಯೂ ಬಹುಶಃ ಬ್ರಿಟಿಷ ಜಿಲ್ಹೆಗಳ ವ್ಯವಸ್ಥೆಯಂತೆಯೇ ಇರುವದು. ಇವುಗಳಲ್ಲಿ ಸವಣೂರ ಸಂಸ್ಥಾನವೂ, ಜಮಖಂಡಿ, ಸಾಂಗಲಿ, ಮಿರಜಿ ಸಂಸ್ಥಾನಗಳೂ ಉತ್ತರ ಕರ್ನಾಟಕದಲ್ಲಿ ಮಹತ್ವದವಿರುತ್ತವೆ. ಇಂಗ್ಲಿಷರ ಒಡತನದಲ್ಲಿ ಕರ್ನಾಟಕದ ಎಲ್ಲ ಭಾಗದಲ್ಲಿ ಶಾಂತತೆಯು ನೆಲೆಗೊಂಡಿರುವದು. ಎಲ್ಲ ಸೀಮೆಗಳ ಜನರು ಬಹು ಸೌಖ್ಯದಿಂದಿರುವರು. ಎಲ್ಲ ಕಡೆಗೆ ವಿದ್ಯೆಯು ಒತ್ತರದಿಂದ ಸಾಗುತ್ತಿರುವದು. ಜನರು ಹೊಸ ಉದ್ಯೋಗಗಳನ್ನು ಕೈಕೊಳ್ಳುತ್ತಿರುವರು. ಇದರಿಂದ ಕರ್ನಾಟಕದ ವ್ಯಾಪಾರವೂ, ಸಂಪತ್ತೂ ತೀವ್ರವಾಗಿ ಹೆಚ್ಚುತ್ತಿರುವವು.

# ಪ್ರಾಚೀನ ಕಾಲದ ಕರ್ನಾಟಕ.

## ೫ನೇ ಪ್ರಕರಣ.

## ಆಂಧ್ರಭೃತ್ಯರೂ ಚಾಲುಕ್ಯರೂ.

(ಕ್ರಿಸ್ತಶಕದ ೭ನೆಯ ಶತಮಾನದ ವರೆಗೆ.)

ಕ್ರಿಸ್ತಶಕದ ಹಿಂದಿನ ಕಾಲದ ಇತಿಹಾಸದ ಬಗ್ಗೆ ನಿಶ್ಚಿತವಾದ ವೃತ್ತಾಂತವು ದೊರೆತಿಲ್ಲ. ಕ್ರಿಸ್ತಶಕದ ಆರಂಭದಿಂದ ೪ನೆಯ ಶತಮಾನದ ವರೆಗೆ ಆಂಧ್ರಭೃತ್ಯರೆಂಬ ಅರಸರು ದಕ್ಷಿಣ ಹಿಂದುಸ್ತಾನದ ಬಹುಭಾಗದ ಒಡೆಯರಿದ್ದರು. ಕೃಷ್ಣೆಯ ದಂಡೆಯ ಮೇಲಿರುವ ಧರಣೀಕೋಟ ಎಂಬ ಪಟ್ಟಣವು ಇವರ ಮೊದಲಿನ ರಾಜಧಾನಿಯು. ಉತ್ತರ ಹಿಂದುಸ್ತಾನದಲ್ಲಿ ಆಗ ಕ್ಷೇತ್ರಪರೆಂಬ ಬಲಾಢ್ಯ ಅರಸರು ಇದ್ದರು. ಇವರನ್ನು ದಕ್ಷಿಣಕ್ಕೆ ಬರಗೊಡದಂತೆ ಆಂಧ್ರ ಭೃತ್ಯರು ಪೈಠಣ ಎಂಬಲ್ಲಿ ಮತ್ತೊಂದು ರಾಜಧಾನಿಯನ್ನು ಸ್ಥಾಪಿಸಿದರು. ಇವರ ಕಾಲದಲ್ಲಿ ಕರ್ನಾಟಕದಲ್ಲಿ ಕೊಲ್ಲಾಪುರವೂ ಬನವಾಸಿಯೂ ಹೆಸರಾದ ಪಟ್ಟಣಗಳಿದ್ದವು. ಮೈಸೂರಿನ ವಾಯವ್ಯಕ್ಕೆ ಬನವಾಸಿಯಲ್ಲಿ ಕದಂಬರೂ, ಪೂರ್ವದ ಕಡೆಗೆ ತಲಕಾಡದಲ್ಲಿ ಗಂಗರೂ ಆಳುತ್ತಿದ್ದರು. ದಕ್ಷಿಣದಲ್ಲಿ **ಚೋಳ, ಚೇರ,** ಪಾಂಡ್ಯರೆಂಬ ಮೂರು ದ್ರವಿಡ ರಾಜ್ಯಗಳಿದ್ದವು. ಆಗ ಬೌದ್ಧ ಬ್ರಾಹ್ಮಣ ಧರ್ಮಗಳೆರಡೂ ಊರ್ಜಿತ ಸ್ಥಿತಿಯಲ್ಲಿದ್ದವು.

**ಆಂಧ್ರ ಭೃತ್ಯರು.**

ಕ್ರಿಸ್ತಶಕದ ೩೫೦ರ ಸುಮಾರಿಗೆ ಸಮುದ್ರಗುಪ್ತನೆಂಬ ಕ್ಷೇತ್ರಪ ಸಾರ್ವಭೌಮನು ದಂಡೆತ್ತಿ ಬಂದಾಗ ಕರ್ನಾಟಕದಲ್ಲಿ ಚಾಲುಕ್ಯರು ಆಳುತ್ತಿದ್ದರು. ಮುಂದೆ ೨೦೦ ವರ್ಷಗಳ ವರೆಗೆ ಇಲ್ಲಿ ಯಾವ ಮಹತ್ವದ ಸಂಗತಿಯೂ ಒದಗಲಿಲ್ಲ. ಮಹಾರಾಷ್ಟ್ರದಲ್ಲಿ ರಾಷ್ಟ್ರಕೂಟರು ಸ್ವತಂತ್ರರಾಗಲಿಕ್ಕೆ ಹವಣಿಸುತ್ತಿದ್ದರು. ಇವರನ್ನು ಮುರಿಬಡಿದು ಮಹಾರಾಷ್ಟ್ರದಲ್ಲಿ ಚಾಲುಕ್ಯರೂ, ಬಿಜಾಪುರದಿಂದ ದಕ್ಷಿಣದಲ್ಲಿ ಕಾಂಚಿಯ ಪಲ್ಲವರೂ ಪ್ರಬಲರಾಗುತ್ತ ನಡೆದಿದ್ದರು. ಈ ಮೇರೆಗೆ ಕರ್ನಾಟಕದ ಒಡೆತನಕ್ಕಾಗಿ ಚಾಲುಕ್ಯರೂ ಪಲ್ಲವರೂ ಹೆಣಗುತ್ತಿದ್ದರು. ಗಂಗರೂ ಕದಂಬರೂ ಸ್ವಾತಂತ್ರ್ಯಕ್ಕಾಗಿ ಪಲ್ಲವರೊಡನೆ ಕಲಿತನದಿಂದ ಕಾದಿದರು.

**ಚಾಲುಕ್ಯರು.**

೬ನೆಯ ಶತಮಾನದ ಕೊನೆಯಲ್ಲಿ ಚಾಲುಕ್ಯರ ಅರಸನಾಗಿದ್ದ ೧ನೇ ಪುಲಿಕೇಶಿಯು ಪಲ್ಲವರ ಉತ್ತರದ ರಾಜಧಾನಿಯಾಗಿದ್ದ ಬಾದಾಮಿಯನ್ನು ಗೆದ್ದುಕೊಂಡು ಚಾಲುಕ್ಯರ ರಾಜಧಾನಿಯಾಗಿ ಮಾಡಿದನು. ಇವನು ಬಹುಶೂರನು. ಇವನ ಕಾಲದಲ್ಲಿಯೇ ಚಾಲುಕ್ಯರ ಘನತೆಗೆ ಆರಂಭವಾಯಿತು. ಪಲ್ಲವರನ್ನು ಬಾದಾಮಿಯಿಂದ ತಳ್ಳಿದ ಬಳಿಕ ಇವನು ಸಾರ್ವಭೌಮಸೂಚಕವಾದ ಅಶ್ವಮೇಧಯಜ್ಞವನ್ನು ಮಾಡಿದನು.

**೧ನೇ ಪುಲಿಕೇಶಿ.**

ಕ್ರಿಸ್ತಶಕದ ೬೦೯ರಲ್ಲಿ ಬಾದಾಮಿಯಲ್ಲಿ ಸಿಂಹಾಸನವನ್ನೇರಿದ ೨ನೇ ಪುಲಿಕೇಶಿಯು ಚಾಲುಕ್ಯ ಅರಸರಲ್ಲಿ ಬಹು ಹೆಸರಾದವನು. ಈತನ ತಂದೆಯಾದ ಕೀರ್ತಿವರ್ಮನು ಇ. ಸ. ೫೯೭ರಲ್ಲಿ ಮಡಿದನು. ಆಗ ಪುಲಿಕೇಶಿಯು ಸಣ್ಣವನಿದ್ದದರಿಂದ ಮಂಗಲೇಶನೆಂಬ ಈತನ ಕಕ್ಕನು ಸಿಂಹಾಸನವನ್ನೇರಿದನು. ಮಂಗಲೇಶನು ತೀರಿಕೊಂಡ ಬಳಿಕ ಸತ್ಯಾಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾಜನೆಂಬ ಬಿರುದಿನೊಡನೆ ೨ನೇ ಪುಲಿಕೇಶಿಯು ಇ. ಸ. ೬೦೯ರಲ್ಲಿ ಸಿಂಹಾಸನವನ್ನೇರಿದನು. ಕೂಡಲೆ ರಾಜ್ಯ ಬೆಳಿಸುವ ಹಂಚಿಕೆಯಲ್ಲಿಯೇ ಮುಳುಗಿದ್ದ ಸುತ್ತಲಿನ ಅರಸರು ಕಾಳಗ ಹೂಡಿದರು. ಇವನು ಮಹಾರಾಷ್ಟ್ರದಲ್ಲಿ ರಾಷ್ಟ್ರಕೂಟರ ಅರಸನಾಗಿದ್ದ **ಗೋವಿಂದನನ್ನು** ಸೋಲಿಸಿದನು. ಗೋವಿಂದನು ಪುಲಿಕೇಶಿಯ ಮಾಂಡಲಿಕನಾದನು. ಬನವಾಸಿಯ ಕದಂಬರೂ ಸೋತರು; ಗಂಗರ ಗತಿಯೂ ಹೀಗೇ ಆಯಿತು. ಇವರಂತೆಯೇ ಮಲಬಾರದ ದಂಡೆಯಲ್ಲಿದ್ದ **ಅಲೂಪರ** ಅರಸನೂ ೨ನೇ ಪುಲಿಕೇಶಿಯ ಒಡೆತನವನ್ನು ಒಪ್ಪಿಕೊಂಡನು. ಇವನು ನೂರು ಹಡಗಗಳನ್ನು ಒಯ್ದು ಪಶ್ಚಿಮದಂಡೆಯ ಮೇಲಿದ್ದ **ಪುರಿ** ಎಂಬ ಬಂದರವನ್ನು ವಶಮಾಡಿಕೊಳ್ಳಲು ಕೊಂಕಣದ ಅರಸನು ಇವನಿಗೆ ಶರಣು ಬಂದನು. ಪುಲಿಕೇಶಿಯು ಬಳಿಕ ಕೊಂಕಣದ ಉತ್ತರಭಾಗದಲ್ಲಿದ್ದ **ಲಾಟದೇಶವನ್ನು** ವಶಮಾಡಿಕೊಂಡು **ಗುಜರಾಥ ಮಾಳ್ವ** ದೇಶಗಳನ್ನು ಹೊಕ್ಕನು. ಈ ದೇಶದ ಅರಸರೆಲ್ಲರು ಪುಲಿಕೇಶಿಗೆ ಶರಣು ಬಂದರು. ಆಗ ಶಿಲಾದಿತ್ಯವಂಶದ **ಹರ್ಷವರ್ಧನನು** ಉತ್ತರ ಹಿಂದುಸ್ತಾನಕ್ಕೆಲ್ಲ ಸಾರ್ವಭೌಮನಾಗಿದ್ದನು. ಈತನು ಬಳ್ಳೇ ಪ್ರತಾಪಶಾಲಿಯು. ಈತನು ದಕ್ಷಿಣಹಿಂದುಸ್ತಾನವನ್ನು ಗೆದ್ದು, ಇಡಿ ಹಿಂದುಸ್ತಾನದ

**೨ನೇ ಪುಲಿಕೇಶಿ.**

**೨ನೇ ಪುಲಿಕೇಶಿಯ ವಿಜಯಗಳು.**

ಚಕ್ರವರ್ತಿಯಾಗಬೇಕೆಂದು ದೊಡ್ಡ ಸೈನ್ಯದೊಡನೆ ನರ್ಮದೆಯನ್ನು ದಾಟಿ ಬಂದನು. ಪುಲಿಕೇಶಿಯು ತನ್ನ ಸಾಮ್ರಾಜ್ಯದ ಉತ್ತರಮೇರೆಯಾದ ನರ್ಮ




ಏಳನೇ ಶತಮಾನದ ಹಿಂದುಸ್ತಾನ, ಮತ್ತು ಚಾಲುಕ್ಯರ ರಾಜ್ಯವಿಸ್ತಾರ.

**ಹರ್ಷ ವರ್ಧನನ ಸೋಲು.**

ದೆಯ ಬಳಿಯಲ್ಲಿಯೇ ಹರ್ಷವರ್ಧನನನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಆ ಬಳಿಕ ಬಹುಕಾಲದ ವರೆಗೆ ಯಾರೂ ಉತ್ತರ ಹಿಂದುಸ್ತಾನದ ಒಡೆಯರಾಗಲಿಲ್ಲ. ಈ ದೊಡ್ಡ ಗೆಲವಿನ ನೆನಪಿಗೆಂದು ಪುಲಿಕೇಶಿಯು ಪರಮೇಶ್ವರನೆಂಬ ಬಿರುದು

ಧರಿಸಿದನು. ಚಾಲುಕ್ಯವಂಶದ ಮುಂದಿನ ಅರಸರೆಲ್ಲ ಈ ಬಿರುದನ್ನು ಬಹಳ ಅಭಿಮಾನದಿಂದ ಧರಿಸುತ್ತಿದ್ದರು. ಈ ಮೇರೆಗೆ ಭುಜಬಲದಿಂದ ಕನ್ನಡ ರಾಜ್ಯವನ್ನು ವಿಸ್ತಾರಪಡಿಸಿ, ಇವನು ಚಾಲುಕ್ಯರ ಘನತೆಯನ್ನು ಬಹಳ ಬೆಳಿಸಿದನು. ೨ನೆಯ ಪುಲಿಕೇಶಿಯೇ ಕರ್ನಾಟಕದ ಮೊದಲನೆಯ ಚಕ್ರ ವರ್ತಿಯು. ಚಾಲುಕ್ಯರು ಘನತೆಗೇರಿದ್ದರಿಂದ ಕಾಂಚಿಯ ಪಲ್ಲವರ ಸೊಕ್ಕು ಕಡಿಮೆಯಾಯಿತು. ಪುಲಿಕೇಶಿಯು ಇವರ ರಾಜ್ಯದ ಮೇಲೆ ದಂಡೆತ್ತಿಹೋಗಿ ಕಾಂಚೀಪುರಿಯನ್ನು ಮುತ್ತಿದನು. ಬಳಿಕ ಕಾವೇರಿಯನ್ನು ದಾಟಿ ಪಾಂಡ್ಯ ಚೋಳ ಚೇರರನ್ನು ಕೆಣಕಿದನು. ಇವರೆಲ್ಲರು ಪುಲಿಕೇಶಿಯ ಒಡೆತನವನ್ನು ಒಪ್ಪಿಕೊಂಡರು. ಬಳಿಕ **ರಾಜಮಹೇಂದ್ರಿ**ಯನ್ನು ಚಾಲುಕ್ಯರ ದಕ್ಷಿಣದ ರಾಜಧಾನಿಯನ್ನಾಗಿ ಮಾಡಿದನು. ಈತನ ಕೀರ್ತಿಯು ಹಿಂದುಸ್ತಾನದ ಹೊರಗೂ ಹಬ್ಬಿತು. ಇ. ಸ. ೬೨೬ರಲ್ಲಿ ಇರಾಣದ ಬಾದಶಹನು ಈತನ ಕಡೆಗೆ ಒಬ್ಬ ರಾಯಭಾರಿಯನ್ನು ಕಳಿಸಿದ್ದನು. ಸತ್ಯಾಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾಜ ಪರಮೇಶ್ವರ ೨ನೇ ಪುಲಿಕೇಶಿಯ ರಾಯಭಾರಿಯೂ ಇರಾಣದ ಅರಸನ ಓಲಗಕ್ಕೆ ಹೋದನು. ಪುಲಿಕೇಶಿಗೆ **ವಿಷ್ಣುವರ್ಧನ**ನೆಂಬ ಒಬ್ಬ ತಮ್ಮನಿದ್ದನು. ಇವನು **ಸಾತಾರೆ ಪಂಢರಪುರ** ಪ್ರಾಂತಗಳನ್ನು ಆಳುತ್ತಿದ್ದನು. ಪುಲಿಕೇಶಿಯು ಇವನನ್ನು **ವೆಂಗಿಮಂಡಲದ** ಮಂಡಲೇಶ್ವರನನ್ನಾಗಿ ಕಳಿಸಿದನು. ವೆಂಗಿಮಂಡಲವು ತೆಲಗು ದೇಶವು. ಅಲ್ಲಿ ಅವನು ಪೂರ್ವದ ಚಾಲುಕ್ಯರೆಂದು ಹೆಸರಾದ ರಾಜವಂಶದ ಮೂಲಪುರುಷನಾದನು.

**ಇರಾಣದ ರಾಯಭಾರಿಯು ಬಂದದ್ದು.**

೨ನೇ ಪುಲಿಕೇಶಿಯ ಆಳಿಕೆಯಲ್ಲಿ **ಹುವೆನ್‌ತ್ಸಾಂಗ**ಸೆಂಬ ಬೌದ್ಧಪ್ರವಾಸಿಯು ಹಿಂದುಸ್ತಾನದಲ್ಲಿ ಸಂಚಾರ ಮಾಡಿ, ಈತನ ರಾಜ್ಯವನ್ನೂ ಪ್ರಜೆಗಳನ್ನೂ ಕುರಿತು ಬರೆದದ್ದು ಹ್ಯಾಗೆಂದರೆ:— "ಮಹಾರಾಷ್ಟ್ರದ (ಅಂದರೆ ಪುಲಿಕೇಶಿಯ) ರಾಜ್ಯದ ಸುತ್ತಳತೆ ಸುಮಾರು ೧೨೦೦ ಮೈಲು ಉಂಟು. ರಾಜಧಾನಿಯು ಪಶ್ಚಿಮ ಭಾಗದಲ್ಲಿದ್ದ ಒಂದು ದೊಡ್ಡ ಹೊಳೆಯ ನೆರೆಯಲ್ಲಿದೆ. ಇದರ ಸುತ್ತಳತೆ ಸುಮಾರು ೬ ಮೈಲು. ಭೂಮಿಯು ಫಲವುಳ್ಳದ್ದಿರುತ್ತದೆ; ಅದರಲ್ಲಿ ಧಾನ್ಯಗಳು ಬಹಳ ಬೆಳೆಯುತ್ತವೆ. ಹವೆಯು ಸ್ವಲ್ಪ ಸೆಕೆಯುಳ್ಳದ್ದು. ಜನರು ಪ್ರಾಮಾಣಿಕರು; ಇವರ ನಿಲುವಿಕೆ ಎತ್ತರ, ನಡತೆ ಸೊಕ್ಕಿನದು. ಇವರಿಗೆ ಉಪಕಾರ

**ಚೀನದ ಪ್ರವಾಸಿಯು ಬರಹ.**

ಮಾಡುವವನು ಇವರಿಂದ ತನಗೆ ಪ್ರತ್ಯುಪಕಾರವಾಗುವದೆಂದು ನಂಬಬಹುದು; ಮತ್ತು ಇವರಿಗೆ ಕೇಡು ಬಗೆದವನು ಇವರ ಡಂಕು ತಪ್ಪಿಸಲಾರನು. ಇವರಿಗೆ ಯಾರಾದರೂ ಅಪಮಾನ ಮಾಡಿದರೆ ಅದನ್ನು ಪರಿಹರಿಸುವದಕ್ಕೋಸ್ಕರ ಇವರು ತಮ್ಮ ಜೀವಕ್ಕೆ ಸಹ ಅಪಾಯಮಾಡಿಕೊಳ್ಳುವರು. ಸಂಕಟದಲ್ಲಿ ಯಾರಾದರೂ ಇವರನ್ನು ಮರೆಹೊಕ್ಕರೆ, ಅಂಥವರನ್ನು ಸಂರಕ್ಷಿಸುವದರಲ್ಲಿ ಇವರು ತಮ್ಮನ್ನೇ ಮರೆತುಬಿಡುವರು. ರಣಭೂಮಿಯಿಂದ ಓಡಿಹೋಗುವವರನ್ನು ಇವರು ಬೆನ್ನಟ್ಟುತ್ತಾರೆ; ಆದರೆ ಅವರು ಮರೆಹೊಕ್ಕರೆ ಅವರನ್ನು ಕಡಿಯುವದಿಲ್ಲ. ದಳವಾಯಿಯು ಯುದ್ಧದಲ್ಲಿ ಸೋತುಬಂದರೆ, ಅರಸನು ಅವನಿಗೆ ದೇಹದಂಡನೆಯನ್ನು ಮಾಡುವದಿಲ್ಲ, ಸೀರೆಯನ್ನು ಉಡಿಸುತ್ತಾನೆ. ಈ ಸಂಸ್ಥಾನದಲ್ಲಿ ಎದೆಗುಂದದಂಥ ದಂಡಾಳುಗಳು ಸಾವಿರಾರು ಜನರಿದ್ದಾರೆ. ಇಂಥ ದಂಡಿನವರೆದುರಿಗೆ ಯಾರೂ ನಿಲ್ಲಲಾರರು. ಈ ಪ್ರಕಾರದ ದಂಡಿನ ಬಲದಿಂದ ಅರಸನು ನೆರೆಹೊರೆಯ ಅರಸರನ್ನು ಧಿಕ್ಕರಿಸುತ್ತಾನೆ. ಇವನು ಕ್ಷತ್ರಿಯ ಕುಲದವನು. ಇವನ ಹೆಸರು ಪುಲಿಕೇಶಿ".

೨ನೇ ಪುಲಿಕೇಶಿಯ ತರುವಾಯ ಅವನ ಪ್ರೀತಿಯ ಮಗನಾದ ವಿಕ್ರಮಾದಿತ್ಯನು ಇ. ಸ. ೬೫೫ರಲ್ಲಿ ಪಟ್ಟವೇರಿದನು. ಚಾಲುಕ್ಯರ ಹಗೆಗಳಾದ ಪಲ್ಲವರು ಸುಮ್ಮನೆ ಕುಳಿತಿರಲಿಲ್ಲ. ಕಾಂಚಿಯ **ನರಸಿಂಹವರ್ಮನು** ದೊಡ್ಡ ಸೈನ್ಯದೊಡನೆ ಬಂದು ಬಾದಾಮಿಯನ್ನು ಸುಟ್ಟು ಹೋದನು. ಚೋಳ, ಚೇರ,

**ಪಲ್ಲವರು ಬಾದಾಮಿಯನ್ನು ಸುಟ್ಟದ್ದು.**

ಪಾಂಡ್ಯ ಅರಸರು ಚಾಲುಕ್ಯರ ಒಡೆತನವನ್ನು ಒಪ್ಪಿದಾದರು. ವಿಕ್ರಮಾದಿತ್ಯನು ಮತ್ತೆ ವಿಜಯಯಾತ್ರೆಯನ್ನು ಆರಂಭಿಸಿ ಕಾಂಚೀಪುರಿಯನ್ನು ಹೊಕ್ಕನು; ಬಡಬಗ್ಗರಿಗೆ ದ್ರವ್ಯಸಹಾಯಮಾಡಿ, ನರಸಿಂಹವರ್ಮನು ಕಟ್ಟಿಸಿದ್ದ ಗುಡಿಗಳಿಗೆ ಬಹಳ ಹಣ ಕೊಟ್ಟನು; ಬಳಿಕ ಚೋಳ ಮೊದಲಾದ ಅರಸರನ್ನು ಸೋಲಿಸಿ ದಕ್ಷಿಣಮಹಾಸಾಗರದ ದಂಡೆಯ ಮೇಲೆ ವಿಜಯಸ್ತಂಭವನ್ನು ನಿಲ್ಲಿಸಿ ಬಂದನು.

ಉತ್ತರದ ರಾಷ್ಟ್ರಕೂಟರಿಂದ ಚಾಲುಕ್ಯರಿಗೆ ತೊಂದರೆಯಾಗಲಿಲ್ಲ. ದಕ್ಷಿಣದ ಅರಸರು ಮಾತ್ರ ಸುಮ್ಮನೆ ಕೂಡ್ರಲಿಲ್ಲ. ಪಲ್ಲವರಿಗೂ ಚಾಲುಕ್ಯ

**ಪಲ್ಲವ ಚಾಲುಕ್ಯರ ಯುದ್ಧಗಳು.**

ರಿಗೂ ಕದನಗಳು ನಡೆದೇ ಇದ್ದವು. ಮುಂದೆ ಸುಮಾರು ನೂರು ವರ್ಷಗಳ ವರೆಗೆ ಯುದ್ಧಗಳು ನಡೆದು ಎರಡೂ ರಾಷ್ಟ್ರದವರು ಸಣ್ಣಾದ ಬಳಿಕ,

ಕೀರ್ತಿವರ್ಮನ ಆಳಿಕೆಯಲ್ಲಿ ಚಾಲುಕ್ಯರ ಒಡೆತನವು ಮಹಾರಾಷ್ಟ್ರದಲ್ಲಿ ಮೆಲ್ಲನೆ ಪ್ರಬಲರಾಗುತ್ತಿದ್ದ ರಾಷ್ಟ್ರಕೂಟರ ಕೈಸೇರಿತು. ರಾಷ್ಟ್ರಕೂಟರ ಅರಸನಾದ ದಂತಿದುರ್ಗನು ಪಲ್ಲವರನ್ನು ಏಳಗೊಡಲಿಲ್ಲ.

**ಚಾಲುಕ್ಯರ ಧರ್ಮ.**

ಚಾಲುಕ್ಯರ ಆಳಿಕೆಯಲ್ಲಿ ಬೌದ್ಧಧರ್ಮವು ಕಳೆಗುಂದಹತ್ತಿತು. ಜೈನ ಧರ್ಮವೂ ಬ್ರಾಹ್ಮಣಧರ್ಮವೂ ಏರಿಕೆಯಲ್ಲಿದ್ದವು. ಗುಡ್ಡಗಳಲ್ಲಿ ಕೊರೆದು ತೆಗೆದ ಚೈತ್ಯಾಲಯಗಳಂತೆ ವಿಷ್ಣು ಶಿವ ಮೊದಲಾದ ಬ್ರಾಹ್ಮಣ ಗುಡಿಗಳು ಆಗಹತ್ತಿದವು. ಬಾದಾಮಿಯ ಗುಡಿಯು ಮಂಗಲೇಶನ ಕಾಲದಲ್ಲಿಯೇ ರಚಿತವಾಯಿತು. ಚಾಲುಕ್ಯರು ವಿಷ್ಣುಪೂಜಕರಿದ್ದರು. ಇವರೂ ಎಲ್ಲ ಧರ್ಮಗಳಿಗೆ ಆಶ್ರಯ ಕೊಟ್ಟಿದ್ದರು.

---

## ೭ನೇ ಪ್ರಕರಣ.

## ರಾಷ್ಟ್ರಕೂಟರು.

(೭ರಿಂದ ೧೦ನೆಯ ಶತಮಾನದ ವರೆಗೆ.)

೭ನೆಯ ಶತಮಾನದಿಂದ ಕರ್ನಾಟಕದಲ್ಲಿ **ರಾಷ್ಟ್ರಕೂಟರು** ಮೆಲ್ಲನೆ ತಲೆಯೆತ್ತುತ್ತಿದ್ದರು. ೮ನೇ ಶತಮಾನದ ಆರಂಭದಲ್ಲಿ ಚಾಲುಕ್ಯರಿಗೂ ಪಲ್ಲವರಿಗೂ ನಡೆದ ಯುದ್ಧಗಳಿಂದ ಇಬ್ಬರೂ ದುರ್ಬಲರಾದರು. ಈ ಸಂಧಿ ಸಾಧಿಸಿ ಮೈಸೂರಿನಲ್ಲಿ ಗಂಗ ಅರಸರು ಏರುತ್ತಿದ್ದರು. ಇವರ ರಾಜಧಾನಿಯು ಮೊದಲು ಕೋಲಾರದಲ್ಲಿತ್ತು. ಬಳಿಕ ದಕ್ಷಿಣದಲ್ಲಿ ಪ್ರಬಲರಾಗುತ್ತಿದ್ದ ಚೋಳರನ್ನು ತಡೆದು, ಇವರು ತಲಕಾಡ ಎಂಬದನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು.

**೩ನೇ ಗೋವಿಂದನು.**

ಕ್ರಿಸ್ತಶಕದ ೭೯೪ರಲ್ಲಿ ಪಟ್ಟವೇರಿದ ೩ನೇ ಗೋವಿಂದನು ರಾಷ್ಟ್ರಕೂಟರಲ್ಲಿ ಹೆಸರಾದನು. ಇವನ ಭವ್ಯರೂಪವನ್ನೂ ಬುದ್ಧಿವಂತಿಕೆಯನ್ನೂ ನೋಡಿ ಈತನ ತಂದೆಯು ತಾನು ಬದುಕಿರುವಾಗಲೇ ಇವನಿಗೆ ಪಟ್ಟಗಟ್ಟಬೇಕೆಂದು ಯೋಚಿಸಿದ್ದನು. ಇದಕ್ಕೆ ಗೋವಿಂದನು ಒಪ್ಪಲಿಲ್ಲ. ತಂದೆಯು ತೀರಿದ ಕೂಡಲೆ ಗೋವಿಂದನು ಪಟ್ಟಕ್ಕೆ ಕುಳಿತನು. ಆದರೆ ಇವನ ಅಣ್ಣನು ಹನ್ನೆರಡು ಜನ ಅರಸರ ಸಹಾಯದಿಂದ

ಯುದ್ಧ ಹೂಡಿದನು. ಗೋವಿಂದನ ಸಹಾಯಕ್ಕೆ ಯಾರೂ ಬರಲಿಲ್ಲ. ಆದರೂ ಸ್ವಂತ ವಿಕ್ರಮದಿಂದ ಇವನು ಎಲ್ಲರನ್ನೂ ಸೋಲಿಸಿದನು; ಹಾಗು ತನ್ನ ತಂದೆಯು ಗಂಗ ಅರಸನನ್ನು ಸೆರೆಯಲ್ಲಿಟ್ಟದ್ದರಿಂದ ಅಣ್ಣನನ್ನು ಗಂಗ ಮಂಡಲದ ಅರಸನನ್ನಾಗಿ ನೇಮಿಸಿದನು. ಇವನು ತೀರಿಕೊಂಡ ಬಳಿಕ ಗೋವಿಂದನು ಗಂಗ ಅರಸನ ಬಿಡುಗಡೆ ಮಾಡಿದನು.

ಇಸೇ ಗೋವಿಂದನು **ಗುರ್ಜರರ** ಅರಸನನ್ನು ಸೋಲಿಸಿದ್ದಲ್ಲದೆ, **ಮಾಳ್ವ** ದೇಶದ ರಾಜನನ್ನು ಮಾಂಡಲಿಕನನ್ನಾಗಿ ಮಾಡಿಕೊಂಡನು. ಬಳಿಕ ದಕ್ಷಿಣಕ್ಕೆ

**ಗೋವಿಂದನ ವಿಜಯುಗಳು.**

ಸಾಗಿ ತುಂಗಭದ್ರೆಯ ದಡದಲ್ಲಿ ನಿಂತು ಪಲ್ಲವರಿಂದ ಕಪ್ಪವನ್ನು ಸ್ವೀಕರಿಸಿದನು. ವೆಂಗಿಮಂಡಲದ ಅರಸನೂ ಇವನ ಒಡೆತನವನ್ನು ಒಪ್ಪಿಕೊಂಡನು. ಈ ಮೇರೆಗೆ ನರ್ಮದೆಯಿಂದ ತುಂಗಭದ್ರೆಯ ವರೆಗೆ ರಾಷ್ಟ್ರಕೂಟರ ರಾಜ್ಯ ಬೆಳಿಸಿ **ಮಾಳ್ವದಿಂದ ಕಾಂಚಿಯ** ವರೆಗಿರುವ ಪ್ರದೇಶದ ಒಡೆಯನಾಗಿ ಆಳಿದನು.

ಈತನ ಮಗನಾದ **ಅಮೋಘವರ್ಷನು** ಇ. ಸ ೮೧೫ರಲ್ಲಿ ಪಟ್ಟವೇರಿ ೬೨ ವರುಷ ಶಾಂತತೆಯಿಂದ ಆಳಿದನು. ಆಗ ಗಂಗ ಅರಸರು ಸ್ವತಂತ್ರರಾಗ

**ಅಮೋಘವರ್ಷ ನೃಪತುಂಗ.**

ಲಿಕ್ಕೆ ಹವಣಿಸಿದರು. ಅಮೋಘವರ್ಷನಿಗೆ ಅವರನ್ನು ಸೋಲಿಸುವದಾಗಲಿಲ್ಲ. ಆದ್ದರಿಂದ ಇವನು ಅವರೊಡನೆ ಶರೀರಸಂಬಂಧ ಮಾಡಿ ಸ್ನೇಹ ಬಳಸಿದನು. ಈ ಬಳಿಕ ಗಂಗ ಅರಸರು ರಾಷ್ಟ್ರಕೂಟರೊಡನೆ ಹಗೆತನ ಹೂಡಲಿಲ್ಲ. ಇವನು **ನೃಪತುಂಗನೆಂದೂ** ಹೆಸರಾಗಿರುವನು. ವಿದ್ಯೆಯಲ್ಲಿ ಇವನಿಗೆ ಆಸಕ್ತಿ ಬಹಳ; ಶ್ರೇಷ್ಠಕವಿಯಿದ್ದನು. ಸದ್ಯಕ್ಕೆ ದೊರೆತಿರುವ ಪ್ರಾಚೀನ ಕಾಲದ ಕನ್ನಡ ಗ್ರಂಥಗಳಲ್ಲಿ ನೃಪತುಂಗನು ಬರೆದ **ಕವಿರಾಜಮಾರ್ಗವೆಂಬದೇ ಮೊದಲನೆಯದಿರುವದು.**

ಇ. ಸ. ೮೭೫ರಿಂದ ಮುಂದೆ ನೂರು ವರ್ಷಗಳ ವರೆಗೆ ರಾಷ್ಟ್ರಕೂಟ ಅರಸರು ಆಳಿದರು. ಆದರೆ ಇವರು ದುರ್ಬಲರಿದ್ದರು. ಇವರ ಕಾಲದಲ್ಲಿ

**ಕಕ್ಕಲನು.**

ಪಶ್ಚಿಮದ ಚಾಲುಕ್ಯರು ಪ್ರಬಲರಾಗುತ್ತ ನಡೆದರು. **ತೈಲನೆಂಬ** ಚಾಲುಕ್ಯ ಭೂಪಾಲನು ಇ. ಸ. ೯೭೩ರಲ್ಲಿ ರಾಷ್ಟ್ರಕೂಟರ ಕೊನೆಯ ಅರಸನಾದ **ಕಕ್ಕಲನನ್ನು** ಸೋಲಿಸಿ ಇವನ ಮಗಳನ್ನು ಮದುವೆಯಾದನು. ಗಂಗರ ಅರಸನಾದ **ಮಾರಸಿಂಹನು** ಕಕ್ಕಲನ ಸಿಂಹಾ

ಸನವನ್ನುಳಿಸುವದಕ್ಕೆ ಬಹಳ ಶ್ರಮಬಟ್ಟನು. ಇವನೂ ೯೭೪ರಲ್ಲಿ ಬಂಕಾಪುರ ದಲ್ಲಿ ಮರಣಹೊಂದಿದನು. ಪಲ್ಲವರು ದಕ್ಷಿಣದಲ್ಲಿ ಅಸ್ತರಾದ ಬಳಿಕ ಚೋಳರು ಪ್ರಬಲರಾಗುತ್ತಿದ್ದರು. ಇತ್ತ ರಾಷ್ಟ್ರಕೂಟರು ದುರ್ಬಲರಾದದರಿಂದ ಗಂಗರಿಗೆ ಚೋಳರ ಬಾಧೆಯು ಬಹಳವಾಯಿತು. ಗಂಗರ ಕಡೆಯ ಅರಸನಾದ ಇಂದ್ರನು (ಮಾರಸಿಂಹನ ಮಗನು) ತನ್ನ ಸಿಂಹಾಸನವನ್ನುಳಿಸಿಕೊಳ್ಳಲಿಕ್ಕೆ ವ್ಯರ್ಥ ಶ್ರಮಬಟ್ಟು ಕಡೆಗೆ ನಿರಾಶನಾಗಿ ಇ. ಸ. ೯೮೨ರಲ್ಲಿ ಶ್ರವಣಬೆಳಗೊಳದಲ್ಲಿ ತೀರಿಕೊಂಡನು. ಈ ಮೇರೆಗೆ ೧೦ನೆಯ ಶತಮಾನದ ಕೊನೆಗೆ ಕರ್ನಾಟಕದಲ್ಲಿ ಪಶ್ಚಿಮದ ಚಾಲುಕ್ಯರೂ ದಕ್ಷಿಣದಲ್ಲಿ ಚೋಳರೂ ಒಡೆತನವನ್ನು ಸ್ಥಾಪಿಸಲಿಕ್ಕೆ ಮತ್ತೆ ಮೊದಲಿಟ್ಟರು.

ಈ ಅವಧಿಯಲ್ಲಿ ಬೌದ್ಧಧರ್ಮವು ತೀರ ಕಳೆಗುಂದಿತ್ತು. ಜೈನಧರ್ಮವು ಕಳೆಯಿಂದಿತ್ತು. ರಾಷ್ಟ್ರಕೂಟರ ಹಾಗು ಗಂಗರ ರಾಜಧರ್ಮವು ಜೈನಮತವೇ ಇದ್ದಂತೆ ತೋರುತ್ತದೆ. **ವೇರೂಳದಲ್ಲಿರುವ** ಕೈಲಾಸೇಶ್ವರನ ಅದ್ಭುತವಾದ ದೇವಾಲಯವನ್ನು ರಾಷ್ಟ್ರಕೂಟರ ಕೃಷ್ಣಭೂಪಾಲನು ಗುಡ್ಡದಲ್ಲಿ ಕೊರೆಸಿ ತೆಗಿಸಿದನು. ಕೃಷ್ಣಭೂಪಾಲನು ಶೈವನಿದ್ದಂತೆ ತೋರುತ್ತದೆ. ನೃಪತುಂಗನ ಗುರುವು **ಜಿನಸೇನನೆಂಬ** ಹೆಸರಾದ ಕವಿಯಿದ್ದನು. ಆದರೂ ಎಂದಿನಂತೆ ಈ ಕಾಲದಲ್ಲಿಯೂ ಅರಸರು ಎಲ್ಲ ಧರ್ಮಗಳಿಗೆ ಆಶ್ರಯಕೊಡುತ್ತಿದ್ದರು.

**ರಾಷ್ಟ್ರಕೂಟರ ಧರ್ಮ.**

ರಾಷ್ಟ್ರಕೂಟರ ಆಳಿಕೆಯಲ್ಲಿ ಕನ್ನಡ ನುಡಿಯು ಊರ್ಜಿತ ಸ್ಥಿತಿಯಲ್ಲಿತ್ತು. **ಅಕಲಂಕ ಪೊನ್ನ** ಮೊದಲಾದ ಕನ್ನಡ ಕವಿಗಳು ಇವರ ಆಳಿಕೆಯಲ್ಲಿಯೇ ಇದ್ದರು.

---

## ೭ನೇ ಪ್ರಕರಣ.

## ಪಶ್ಚಿಮದ ಚಾಲುಕ್ಯರು.

(೧೦ರಿಂದ ೧೪ನೆಯ ಶತಮಾನದ ವರೆಗೆ.)

ಪಶ್ಚಿಮದ ಚಾಲುಕ್ಯರು ಹಿಂದೆ ಕರ್ನಾಟಕದಲ್ಲಿ ವೈಭವದಿಂದಾಳಿದ ಚಾಲುಕ್ಯರ ಸಂಬಂಧಿಕರಿದ್ದಂತೆ ತೋರುತ್ತದೆ; ಆದರೆ ಅವರ ಮೂಲವಂಶ

ಜರಲ್ಲ. ದಕ್ಷಿಣದಲ್ಲಿ ಚೋಳರು ಪಲ್ಲವರನ್ನು ಮುರಿಬಡಿಯಲಿಕ್ಕೆ ಹವಣಿಸುತ್ತಿದ್ದರು. ೧೧ನೆಯ ಶತಮಾನದಿಂದ ಇವರಿಗೂ ಚಾಲುಕ್ಯರಿಗೂ ಗಂಗರ ಸೀಮೆಯ ಒಡೆತನದ ಬಗ್ಗೆ ಕದನಗಳಾದವು. ಗಂಗರು ಚಾಲುಕ್ಯರ ಮಾಂಡಲಿಕರಾದರು. ಕರ್ನಾಟಕದ ಹಲವು ಭಾಗಗಳಲ್ಲಿದ್ದ ಸಣ್ಣ ಪುಟ್ಟ ಅರಸರು ಚಾಲುಕ್ಯರ ಒಡೆತನವನ್ನು ಒಪ್ಪಿಕೊಂಡರು. ಇವರಲ್ಲಿ **ದೇವಗಿರಿಯಲ್ಲಿ ಯಾದವರಿದ್ದರು. ಕೊಂಕಣದಲ್ಲಿಯೂ ಕೊಲ್ಹಾಪುರದಲ್ಲಿಯೂ ಶಿಲಾಹಾರರಿದ್ದರು. ಗೋಮಾಂತಕ, ಬನವಾಸಿ, ಹಾನಗಲ್ಲುಗಳಲ್ಲಿ** ಕದಂಬರಿದ್ದರು. ಇವರಲ್ಲದೆ, **ಗುತ್ತಲದಲ್ಲಿ ಗುತ್ತರು,** ಸವದತ್ತಿಯಲ್ಲಿ ರಟ್ಟರು ಮೊದಲಾದ ಹಲವು ಪುಟ್ಟ ಮಾಂಡಲಿಕರಿದ್ದರು.

**ಚಾಲುಕ್ಯರ ಮಾಂಡಲಿಕರು.**

ರಾಷ್ಟ್ರಕೂಟರನ್ನು ಮೂಲೆಗೊತ್ತಿ ಚಾಲುಕ್ಯರ ಒಡೆತನವನ್ನು ಸ್ಥಾಪಿಸಿದ **ತೈಲಪನು** ಇ. ಸ. ೯೭೩ರಲ್ಲಿ ಪಟ್ಟವೇರಿದನು. ಈತನು ಮೊದಲು **ಚೋಳರ** ಕೂಡ ಯುದ್ಧಹೂಡಿ ಚಾಲುಕ್ಯರ ಶಕ್ತಿಯನ್ನು ತೋರಿಸಿದನು. **ಚೇದಿಯ** ಅರಸನನ್ನು ಮಾಂಡಲಿಕನನ್ನಾಗಿ ಮಾಡಿಕೊಂಡನು. **ಗುಜರಾಥದ** ಮೇಲೆ ದಂಡು ಕಳಿಸಿದನು. **ಮಾಳವದಲ್ಲಿ** ಆಗ ಭೋಜರಾಜನ ಕಕ್ಕನಾದ **ಮುಂಜನೆಂಬ** ಅರಸು ಆಳುತ್ತಿದ್ದನು. ಇವನ ರಾಜ್ಯದ ಮೇಲೆ ತೈಲಪನು ದಾಳಿಮಾಡಿ ಬಂದನು. ಮುಂಜನ ಮಂತ್ರಿಗಳು ಚಾಲುಕ್ಯರ ಬಲವನ್ನರಿತು, ಇವರನ್ನು ತಡವಬಾರದೆಂದು ಮುಂಜನಿಗೆ ಉಪದೇಶಿಸಿದರು. ಅವರ ಹಿತಗೋಷ್ಠಿಗೆ ಕಿವಿಗೊಡದೆ, ಮುಂಜನು ದೊಡ್ಡ ದಂಡಿನೊಡನೆ ಗೋದಾವರಿಯನ್ನು ದಾಟಿಬಂದು ಯುದ್ಧಕ್ಕೆ ನಿಂತನು. ತೈಲಪನು ಅವನನ್ನು ಸೋಲಿಸಿ ಸೆರೆಹಿಡಿದನು. ಮುಂಜನು ಆ ಬಳಿಕ ತಪ್ಪಿಸಿಕೊಳ್ಳಲಿಕ್ಕೆ ಹವಣಿಸಿದ್ದರಿಂದ ತೈಲಪನು ಅವನನ್ನು ಪರಿಪರಿಯಿಂದ ಅವಮಾನಪಡಿಸಿ, ಕಡೆಗೆ ಅವನ ತಲೆಹೊಡಿಸಿದನು. ಕರ್ನಾಟಕದ ಕೀರ್ತಿಯನ್ನು ಮತ್ತೆ ಮಾಳವದ ವರೆಗೆ ಹಬ್ಬಿಸಿ ತೈಲಪನು ಇ. ಸ. ೯೯೭ರಲ್ಲಿ ಮರಣ ಹೊಂದಿದನು.

**ತೈಲಪನ ವಿಜಯಗಳು.**

ಇತ್ತ ದಕ್ಷಿಣದಲ್ಲಿ ಚೋಳರು ಪ್ರಬಲರಾಗುತ್ತಿದ್ದರು. ಇವರಲ್ಲಿ ಒಬ್ಬರ ಹಿಂದೊಬ್ಬರಂತೆ ನಾಲ್ಕಾರು ಪರಾಕ್ರಮಿಗಳು ಸಿಂಹಾಸನವೇರಿದರು. ಇ. ಸ. ೯೮೫ರಿಂದ ಇ. ಸ. ೧೦೧೩ರ ವರೆಗೆ ಆಳಿದ ರಾಜರಾಜನು ವೆಂಗಿದೇಶದ ಅರಸ

ನೊಡನೆ ಶರೀರಸಂಬಂಧಮಾಡಿ **ಪೂರ್ವದ ಚಾಲುಕ್ಯರ** ಸ್ನೇಹವನ್ನು ಸ್ಥಿರ ಪಡಿಸಿಕೊಂಡನು. ಆ ಬಳಿಕ ಇ. ಸ. ೧೦೧೩ರಲ್ಲಿ **ರಾಜೇಂದ್ರನು** ಪಟ್ಟವೇರಿ ದನು. ಈತನು ಗಂಗರನ್ನು ಮುರಿಬಡಿದು ಗಂಗದೇಶವನ್ನು ಚೋಳಮಂಡಲಕ್ಕೆ ಸೇರಿಸಿ, **ಗಂಗೈಕೊಂಡ ಚೋಳ** ಎಂಬ ಬಿರುದು ಧರಿಸಿದನು. ಷಡಕ್ಷರಿಯೆಂಬ ಕನ್ನಡ ಕವಿಯು ರಾಜಶೇಖರವಿಲಾಸವೆಂಬ ಕನ್ನಡ ಕಾವ್ಯದಲ್ಲಿ ಇವನನ್ನೂ ಇವನ ವಿಜಯ ಗಳನ್ನೂ ಸರಸವಾಗಿ ಬಣ್ಣಿಸಿದ್ದಾನೆ. ಬಳಿಕ **ರಾಜಾಧಿರಾಜನು** ಇ. ಸ. ೧೦೪೨ರಿಂದ ಇ. ಸ. ೧೦೫೨ರ ವರೆಗೆ ಆಳಿದನು. ಇವನ ಕಾಲದಲ್ಲಿಯೂ ಚೋಳರ ರಾಜ್ಯವು ಒಳ್ಳೇ ಘನತೆಯಲ್ಲಿತ್ತು. ಗಂಗರು ಚೋಳರ ಒಡೆತನ ವನ್ನು ಒಪ್ಪಿರಲಿಲ್ಲ; ಚಾಲುಕ್ಯರ ಸಾರ್ವಭೌಮತ್ವವನ್ನೇ ಅಪೇಕ್ಷಿಸಿದರು. ಚಾಲುಕ್ಯರಾದರೂ ಪ್ರಬಲರಾಗಿದ್ದರು. ಇವರಿಗೂ ಚೋಳರಿಗೂ ಮೇರೆಯ ಸೀಮೆಗಳ ಬಗ್ಗೆ ಕದನಗಳು ನಡೆದೇ ಇದ್ದವು! ರಾಜಾಧಿರಾಜನು ತಂದೆ ಯಂತೆಯೇ ಶೂರನೂ ಪರಾಕ್ರಮಿಯೂ ಇದ್ದನು. ಇವನು ಚೇರಪಾಂಡ್ಯರನ್ನು ಗೆದ್ದು, ಚಾಲುಕ್ಯರನ್ನು ತಡೆದು ನಿಲ್ಲಿಸಿ, **ಸಿಂಹಲದ್ವೀಪದ** ವರೆಗೆ ಸೇನೆಗಳನ್ನು ಒಯ್ದು, ಎಷ್ಟೋ ಅರಸರಿಂದ ಕಪ್ಪವನ್ನೆತ್ತಿ **ಜಯಂಗೊಂಡ ಚೋಳನೆಂಬ** ಬಿರುದು ಧರಿಸಿದನು.

**ಚೋಳ ಕಲಿಗಳು.**

ಇಷ್ಟರಲ್ಲಿ ತೈಲಪನಿಂದ ೫ನೆಯ ತಲೆಯವನಾದ **ಸೋಮೇಶ್ವರ ಆಹವ ಮಲ್ಲನು** ಇ. ಸ. ೧೦೪೨ರಲ್ಲಿ ಚಾಲುಕ್ಯರ ಸಿಂಹಾಸನವೇರಿದನು. ಆಹವ ಮಲ್ಲನ ಹಿಂದಿನ ಮೂವರು ಅರಸರು ಸಾಮ್ರಾಜ್ಯದಲ್ಲಿ ವ್ಯವ ಸ್ಥೆಯುಳಿಸಿಗೊಂಡು, ದಕ್ಷಿಣದಲ್ಲಿ ಚೋಳರೊಡನೆ ಮೇಲಿಂದ ಮೇಲೆ ಹೊಯ್ದಾಡಿದ್ದರು. ಆದರೂ ಸರಹದ್ದಿನ ಪ್ರದೇಶವು ನಿಶ್ಚಿತವಾಗಿರಲಿಲ್ಲ. ಆಹವಮಲ್ಲನು ಶೂರನಿದ್ದನು. ಇ. ಸ. ೧೦೪೪ರಲ್ಲಿ ಇವನು ಚೋಳರೊಡನೆ ಮತ್ತೆ ಯುದ್ಧಕ್ಕೆ ಮೊದಲಿಟ್ಟನು. ಆಗ್ಯೂ ಸೀಮಾಂ ತವು ನಿರ್ಣಯವಾಗಲಿಲ್ಲ. ಮುಂದೆ ಇ. ಸ. ೧೦೫೨ರಲ್ಲಿ ಆಹವಮಲ್ಲನಿಗೂ ರಾಜಾಧಿರಾಜನಿಗೂ ತುಂಗಭದ್ರೆಯ ಮೇಲಿರುವ ಕೊಪ್ಪ ಎಂಬ ಊರಿನ ನೆರೆಯಲ್ಲಿ ದೊಡ್ಡ ಕಾಳಗವಾಯಿತು. ಆಹವ ಮಲ್ಲನಿಗೆ ಜಯವು ಬಂದಿತ್ತು; ರಾಜಾಧಿರಾಜನು ರಣದಲ್ಲಿ ಮಡಿದನು; ಇಷ್ಟರಲ್ಲಿ ಅವನ ತಮ್ಮನಾದ **ರಾಜೇಂದ್ರನು** ಹೊತ್ತಿಗೆ ಹೊಸ

**೧ನೇ ಸೋಮೇಶ್ವರ.**

**ಕೊಪ್ಪದ ಕಾಳಗ ೧೦೫೨.**

ಸೇನೆಸಹಿತವಾಗಿ ಬಂದು, ವಿಕ್ರಮದಿಂದ ಕಾದಿ, ಸೋಲನ್ನು ತಪ್ಪಿಸಿ, ಚೋಳ ಮಂಡಲದ ಸಿಂಹಾಸನಕ್ಕೆ ತನಗಿರುವ ಯೋಗ್ಯತೆಯನ್ನು ಯುದ್ಧಭೂಮಿಯ ಮೇಲೆಯೇ ತೋರಿಸಿಕೊಂಡನು. ತಮಗೆ ಜಯವಾಯಿತೆಂದು ಚಾಲುಕ್ಯರು ಸಾರಿಕೊಂಡರು; ಚೋಳರು ಇದಕ್ಕೆ ಒಪ್ಪಲಿಲ್ಲ. ಸೀಮಾಂತದ ಬಗ್ಗೆ ಎರಡೂ ರಾಷ್ಟ್ರದವರಿಗೆ ಮುಂದೆ ಹೀಗೇ ಕಾಳಗಗಳಾಗುತ್ತಿದ್ದವು.

ಸೋಮೇಶ್ವರನು ಭೋಜರಾಜನ ರಾಜಧಾನಿಯಾದ ಧಾರಾಪುರಿಯ ಮೇಲೆ ದಂಡೆತ್ತಿ ಹೋದನು. ಆಗ ಭೋಜನು ಇನ್ನೂ ಬಾಲಕನಿದ್ದನು.

**ಸೋಮೇಶ್ವರನ ವಿಜಯಗಳು.**

ಮಾಳವದ ಅರಸನು ಸೋಮೇಶ್ವರನ ಸಹಾಯ ಬೇಡಲು ಆಹವಮಲ್ಲನು ಅಲ್ಲಿಗೆ ಹೋಗಿ ಆತನಿಗೆ ಪಟ್ಟಗಟ್ಟಿ ಬಂದನು. ಚಾಲುಕ್ಯರ ರಾಜಧಾನಿಯು ಯಾತಗಿರಿಯಲ್ಲಿತ್ತು. ಸೋಮೇಶ್ವರನು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿದನು. ಆಹವಮಲ್ಲನಿಗೆ **ಸೋಮೇಶ್ವರ, ವಿಕ್ರಮ, ಜಯಸಿಂಹ** ಎಂಬ ಮೂವರು ಮಕ್ಕಳಿದ್ದರು. ಇವರಲ್ಲಿ ನಡುವಿನವನಾದ ವಿಕ್ರಮನೇ ಶೂರನೂ ಚತುರನೂ ಇದ್ದನು. ಇವನನ್ನೇ ಯುವರಾಜನನ್ನಾಗಿ ಮಾಡಬೇಕೆಂದು ಆಹವಮಲ್ಲನು ಯೋಚಿಸಿದ್ದನು. ಆದರೆ ವಿಕ್ರಮನು ಈ ಬಹುಮಾನವನ್ನು ಅಪೇಕ್ಷಿಸಲಿಲ್ಲ. ವಿಕ್ರಮನು ಗಂಗಮಂಡಲದ ಮಂಡಲೇಶ್ವರನಾಗಿ ನೇಮಿಸಲ್ಪಟ್ಟನು. ಜಯಸಿಂಹನು ಪೂರ್ವಕ್ಕೆ ಕಂಪ್ಲಿ ಎಂಬಲ್ಲಿ ಮಂಡಲೇಶನಾದನು. ಇವರ ಅಣ್ಣನಾದ ಸೋಮೇಶ್ವರನು ಹೆಸರಿಗೆ ಯುವರಾಜನಾಗಿದ್ದನು. ಯಾಕೆಂದರೆ ತಂದೆಯು ಹೂಡಿದ ಯುದ್ಧಗಳನ್ನು ವಿಕ್ರಮಾದಿತ್ಯನೇ ನಡೆಸುತ್ತಿದ್ದನು. ಇವನು **ಆಸಾಮ** ಬಂಗಾಲ ಪ್ರಾಂತಗಳ ಮೇಲೆ ದೌಡುಮಾಡಿದನು. **ಕೇರಳ**ದ ಅರಸನನ್ನು ಸೋಲಿಸಿದನು. **ಸಿಂಹಲ**ದ ಅರಸನು ಈತನ ಪ್ರಭುತ್ವವನ್ನು ಒಪ್ಪಿಕೊಂಡನು; ಬರುತ್ತ ಕಾಂಚೀಪುರವನ್ನು ಸುಲಿದನು. ಮುಂದೆ ವೆಂಗಿಮಂಡಲದ ಕಡೆಗೆ ಸಾಗಿದನು.

**ವಿಕ್ರಮಾದಿತ್ಯನ ವಿಜಯಗಳು.**

ಚೋಳರೊಡನೆ ಸೀಮಾಂತದ ಬಗ್ಗೆ ಯುದ್ಧಗಳು ನಡೆದೇ ಇದ್ದವು. ಕೃಷ್ಣಾ ತುಂಗಭದ್ರೆಗಳ ಸಂಗಮದ ಸೆರೆಯಲ್ಲಿ ೩ ಯುದ್ಧಗಳಾಗಿದ್ದವು. ಎರಡೂ ಪಕ್ಷದವರಿಗೆ ಜಯ ದೊರೆತಿರಲಿಲ್ಲ. ಕೊನೆಗೆ ಸೋಮೇಶ್ವರ ಆಹವಮಲ್ಲನು ದೊಡ್ಡ ಸೈನ್ಯದೊಡನೆ ಹೊರಟನು. ಚೋಳರ ಅರಸನಾದ ವೀರರಾಜೇಂದ್ರನು ಕೂಡಲಸಂಗಮವೆಂಬ ಊರ ಬಳಿಗೆ ಛಾವಣಿ ಹಾಕಿ,

ಸೋಮೇಶ್ವರನ ದಾರಿನೋಡಿ ಬೇಸತ್ತು, ಹಿಂದಿರುಗುವವನಿದ್ದನು. ಇಷ್ಟರಲ್ಲಿ ವಿಕ್ರಮಾದಿತ್ಯನು ಸೈನ್ಯದೊಡನೆ ಬಂದು, ವೀರರಾಜೇಂದ್ರನ ಕೂಡ ಸಂಧಿಯನ್ನು ಮಾಡಿ, ಆತನ ಮಗಳನ್ನು ಲಗ್ನಮಾಡಿಕೊಂಡು, ಚೋಳರಿಗೂ ಚಾಲುಕ್ಯರಿಗೂ ಬಹುಕಾಲದಿಂದ ನಡೆದು ಬಂದಿದ್ದ ಹಗೆತನವನ್ನು ನೀಗಿಸಿದನು. ವಿಕ್ರಮಾದಿತ್ಯನು ಹೆಸರಿಗೆ ಒಪ್ಪುವಂತೆ ಶೂರನಿದ್ದನಷ್ಟೇ ಅಲ್ಲ; ರಾಜತಂತ್ರ ಚತುರನೂ ಮಹತ್ವಾಕಾಂಕ್ಷಿಯೂ ಇದ್ದನು. ತನ್ನ ಅಪೇಕ್ಷೆಯನ್ನು ಸಾಧಿಸುವದಕ್ಕಾಗಿಯೇ ಈತನು ಒಮ್ಮಿಂದೊಮ್ಮೆ ತಮ್ಮ ಕುಲಶತ್ರುಗಳಾದ ಚೋಳರೊಡನೆ ಶರೀರಸಂಬಂಧವನ್ನು ಮಾಡಿದನು. ಕೂಡಲಸಂಗಮಕ್ಕೆಂದು ಹೊರಟ ಆಹವಮಲ್ಲನಿಗೆ ಕೆಟ್ಟ ಜ್ವರ ತಗಲಿದ್ದರಿಂದ ಆತನು ತುಂಗಭದ್ರೆಯಲ್ಲಿಯೇ ಮುಳುಗಿ ಪ್ರಾಣಬಿಟ್ಟನು. ಈ ಮೊದಲೇ ವೆಂಗಿಮಂಡಲದ ಅರಸನಾದ **ರಾಜರಾಜನು** ತೀರಿಕೊಂಡಿದ್ದನು. ಆಹವಮಲ್ಲನು ಅಲ್ಲಿ ಪ್ರತಿಷ್ಠೆ ಬೆಳಿಸಲಿಕ್ಕೆ ದಂಡು ಕಳಿಸಿದ್ದನು. ಆದರೆ ವೀರರಾಜೇಂದ್ರನು ಚಾಲುಕ್ಯರ ಹಂಚಿಕೆಯನ್ನರಿತು **ಬೆಜವಾಡದ** ಬದಿಯಲ್ಲಿ ಇವರ ಸೈನ್ಯವನ್ನು ಸೋಲಿಸಿದನು. ಆಹವಮಲ್ಲನ ಬಳಿಕ ತನ್ನ ಅಣ್ಣನಾದ ಸೋಮೇಶ್ವರನು ಪಟ್ಟಕ್ಕೆ ಕೂಡ್ರುವನೆಂದು ವಿಕ್ರಮನಿಗೆ ಗೊತ್ತಿತ್ತು. ಇವನ ಕೈಕೆಳಗೆ ಕೆಲಸಮಾಡುವದು ವಿಕ್ರಮನ ಮನಸಿಗೆ ಬರಲಿಲ್ಲ. ಪೂರ್ವದ ಚಾಲುಕ್ಯರ ಸ್ನೇಹದಿಂದ ಮತ್ತಿಷ್ಟು ಪ್ರಬಲರಾದ ಚೋಳರನ್ನೂ ಅಣ್ಣನನ್ನೂ ತಾನೊಬ್ಬನೇ ಎದುರಿಸುವದು ಸಹ ಸಾಧ್ಯವಲ್ಲೆಂಬದನ್ನು ಇವನು ಅರಿತಿದ್ದನು. ಆದ್ದರಿಂದಲೇ ವಿಕ್ರಮನು ಚೋಳರೊಡನೆ ಸಂಧಿಮಾಡಿಕೊಂಡನು.

**ವಿಕ್ರಮನ ರಾಜತಂತ್ರ.**

ಇ. ಸ. ೧೦೬೮ರಲ್ಲಿ ಸೋಮೇಶ್ವರ ಭುವನೈಕಮಲ್ಲನು ಕಲ್ಯಾಣದಲ್ಲಿ ಪಟ್ಟಕ್ಕೆ ಕುಳಿತನು. ವಿಕ್ರಮನು ಕಲ್ಯಾಣಕ್ಕೆ ಹೋಗಿ ತಾನು ಯುದ್ಧಗಳನ್ನಾಡಿ ತಂದಿದ್ದ ಕೊಳ್ಳೆಯನ್ನೆಲ್ಲ ಅಣ್ಣನಿಗೆ ಕೊಟ್ಟನು. ಕೆಲಕಾಲದ ವರೆಗೆ ಅಣ್ಣತಮ್ಮಂದಿರು ನೆಟ್ಟಗಿದ್ದರು. ಆದರೆ ೨ನೇ ಸೋಮೇಶ್ವರನು ದುರ್ಬಲ ಅರಸನು. ಪ್ರಜೆಗಳನ್ನು ಪೀಡಿಸಿ ಅವರ ಪ್ರೀತಿಯನ್ನು ಕಳಕೊಂಡನು; ವಿಕ್ರಮನ ಬಗ್ಗೆ ಸಂಶಯಪಡಹತ್ತಿದನು. ಇದನ್ನರಿತು ವಿಕ್ರಮನು ಜಯಸಿಂಹನನ್ನು ಕರಕೊಂಡು ಸಾಮ್ರಾಜ್ಯದ ಮಂಡಲೇಶ್ವರರ ಮನಸನ್ನು ಪರೀಕ್ಷಿಸಲಿಕ್ಕೆ ಹೊರಟನು. ಇವರನ್ನು ಬೆನ್ನಟ್ಟಿದ ಸೋಮೇಶ್ವರನ ಸೈನ್ಯವನ್ನು ವಿಕ್ರಮನು ಸುಲಭವಾಗಿ ಸೋಲಿಸಿದನು. ವಿಕ್ರ

**೨ನೇ ಸೋಮೇಶ್ವರ.**

ಮನು ಮೊದಲು ತುಂಗಭದ್ರೆಗೆ ಹೋಗಿ ಬನವಾಸಿಯ ಮೇಲಿಂದ ಗಂಗಮಂಡಲಕ್ಕೆ ಸಾಗಿದನು. ಗೋವೆಯ ಕದಂಬರು ಇವನಿಗೆ ನಜರಾಣೆಯನ್ನು ತಂದೊಪ್ಪಿಸಿದರು. ಮುಂದೆ ಇವನು ಕೇರಳ ದೇಶವನ್ನು ಹೊಕ್ಕನು. ಇಷ್ಟರಲ್ಲಿ (೧೦೭೦) ತನ್ನ ಮೂವನಾದ ವೀರರಾಜೇಂದ್ರನು ಮರಣಹೊಂದಿದ ಸುದ್ದಿಯನ್ನು ಕೇಳಿ, ಕಾಂಚಿಗೆ ಹೋಗಿ ಬೀಗನನ್ನು ಸಿಂಹಾಸನದ ಮೇಲೆ ಕೂಡ್ರಿಸಿ, ತುಂಗಭದ್ರೆಯ ಕಡೆಗೆ ಮರಳಿ ಬಂದನು.

ವಿಕ್ರಮನ ಬೀಗನು ಬಹು ದಿವಸ ಆಳಲಿಲ್ಲ. ಗಂಗೈಕೊಂಡ ಚೋಳನ ಮೊಮ್ಮಗನೂ ವೆಂಗಿದೇಶದ ರಾಜರಾಜನ ಮಗನೂ ಆದ **ರಾಜೇಂದ್ರನು** ಚೋಳರ ಸಿಂಹಾಸನವನ್ನು ಹಿಡಕೊಂಡನು. ಎರಡೂ ಕುಲಗಳ ಉದ್ಧಾರಕನೆಂದು ಇವನಿಗೆ **ಕುಲೋತ್ತುಂಗನೆಂದು** ಹೆಸರಿಟ್ಟಿದ್ದರು. ಈ ಹೆಸರಿಗೆ ತಕ್ಕಂತೆ ಇವನು ಇತಿಹಾಸದಲ್ಲಿ ವಿಖ್ಯಾತನಾದನು. ಇವನು ಬಹು ಶೂರನೂ ವಿಚಾರಿಯೂ ಇದ್ದನು.

**ಕುಲೋತ್ತುಂಗ ಚೋಳ.**

ವಿಕ್ರಮಾದಿತ್ಯನಿಂದ ತನಗೆ ತೊಂದರೆಯಾದೀತೆಂದು ಸೋಮೇಶ್ವರನ ಸಂಗಡ ಸಂಧಿಯನ್ನೆಸಗಿದನು. ವಿಕ್ರಮನು ಕಾಂಚಿಗೆ ಹೊರಟನು. ಹಿಂದೆ ಸೋಮೇಶ್ವರನೂ ಮುಂದೆ ಕುಲೋತ್ತುಂಗನೂ ಸೈನ್ಯಸಹಿತ ಬಂದರು. ವಿಕ್ರಮನು ಎರಡೂ ಸೇನೆಗಳನ್ನು ಚದರಿಸಿ ಅಣ್ಣನನ್ನು ಸೆರೆಹಿಡಿದನು.

ಕುಲೋತ್ತುಂಗನಂಥ ವೀರನು ಚೋಳರ ಅರಸನಿರುವಾಗ ಸೋಮೇಶ್ವರನಂಥ ದುರ್ಬಲನು ಚಾಲುಕ್ಯರ ಸಿಂಹಾಸನದಲ್ಲಿರುವದು ವಿಕ್ರಮನಿಗೆ ಸರಿಯೆನಿಸಲಿಲ್ಲ. ಸಾಮ್ರಾಜ್ಯದ ಮಂಡಲೇಶ್ವರರೆಲ್ಲ ವಿಕ್ರಮನ ಶೌರ್ಯವನ್ನೂ ಬುದ್ಧಿವಂತಿಕೆಯನ್ನೂ ಅರಿತಿದ್ದರು. ಆದ್ದರಿಂದ ಸಮಯವನ್ನರಿತು ಅಣ್ಣನನ್ನು ತಳ್ಳಿ, ವಿಕ್ರಮನು ತ್ರಿಭುವನಮಲ್ಲನೆಂಬ ಬಿರುದಿನೊಡನೆ ೧೦೭೬ರಲ್ಲಿ ಕಲ್ಯಾಣದಲ್ಲಿ ಸಿಂಹಾಸನವನ್ನೇರಿದನು. ಜಯಸಿಂಹನು ಬನವಾಸಿಯ ಮಂಡಲೇಶ್ವರನಾದನು. ಬಳಿಕ ಕುಲೋತ್ತುಂಗನೊಡನೆ ಒಂದೆರಡು ಯುದ್ಧಗಳಾದವು. ಯಾರಿಗೂ ಜಯಬರಲಿಲ್ಲ. ಇಬ್ಬರೂ ಪರಾಕ್ರಮಿಗಳೂ ರಾಜತಂತ್ರವನ್ನು ಬಲ್ಲವರೂ ಇದ್ದರು. ಆದ್ದರಿಂದ ಸೀಮಾಂತವನ್ನು ಯುದ್ಧದಿಂದ ನಿಶ್ಚಯಿಸುವ ಹವ್ಯಾಸಕ್ಕೆ ಇಬ್ಬರೂ ಬೀಳಲಿಲ್ಲ.

**೧೦೭೬.**

ಜಯಸಿಂಹನು ಸ್ವಲ್ಪ ಕಾಲದಲ್ಲಿ ಪ್ರಜೆಗಳನ್ನು ಪೀಡಿಸಿ ಕುಲೋತ್ತುಂಗನನ್ನು ಕೂಡಿ ವಿಕ್ರಮನ ಕೂಡ ಯುದ್ಧ ಹೂಡಿದನು. ಚೋಳರು ಗೆದೆಯುವ

ಚಿನ್ಹಗಳು ತೋರಿದವು. ವಿಕ್ರಮನು ಮದ್ದಾನೆಯನ್ನೇರಿ ಶತ್ರುಸೈನ್ಯವನ್ನು ಹೊಕ್ಕು ಅರಿದಳವನ್ನು ದಿಕ್ಕುಪಾಲು ಮಾಡಿದನು. ಜಯಸಿಂಹನು ಓಡಿ ಹೋದನು. ವಿಕ್ರಮನು ಸೂರೆ ಸಹಿತ ಕಲ್ಯಾಣಕ್ಕೆ ಬಂದು ರಾಜ್ಯವ್ಯವಸ್ಥೆಯನ್ನು ಸುಧಾರಿಸಹತ್ತಿದನು. ಜಯಸಿಂಹನು ತಿರುಗಿಬಿದ್ದ ಬಳಿಕ ದೂರದೂರದಲ್ಲಿದ್ದ ಪ್ರಾಂತಗಳ ಮಂಡಲಾಧಿಪತ್ಯವನ್ನು ವಿಕ್ರಮನು ಅಲ್ಲಲ್ಲಿ ತಲೆಯೆತ್ತುತ್ತಿದ್ದ ಹಳೇ ರಾಜಮನೆತನದ ವೀರರಿಗೆ ಕೊಡಹತ್ತಿದನು. ಇದರಿಂದ ಸಾಮ್ರಾಜ್ಯವು ಬಳ್ಳೇ ಪ್ರಬಲವಾಯಿತು. ಈತನ ರಾಜ್ಯವು ನರ್ಮದೆಯಿಂದ ತುಂಗಭದ್ರೆಯ ವರೆಗೆ ಹಬ್ಬಿತ್ತು; ಮಾಂಡಲಿಕರ ಸಂಖ್ಯೆಯು ದೊಡ್ಡದಿತ್ತು. (೧) ದೇವಗಿರಿಯಲ್ಲಿ ಯಾದವರು (೨) ಕೊಂಕಣದಲ್ಲಿಯೂ (೩) ಕೊಲ್ಲಾಪುರದಲ್ಲಿಯೂ ಶಿಲಾಹಾರರು (೪) ಗೋವೆಯಲ್ಲಿಯೂ (೫) ಹಾನಗಲ್ಲದಲ್ಲಿಯೂ ಕದಂಬರು (೬) ಎಲಬುರ್ಗದಲ್ಲಿ ಸಿಂದರು (೭) ಗುತ್ತಲದಲ್ಲಿ ಗುತ್ತರು (೮) ಸವದತ್ತಿಯಲ್ಲಿ ರಟ್ಟರು (೯) ಬನವಾಸಿಯಲ್ಲಿ ಕದಂಬರು (೧೦) ಗಂಗವಾಡಿಯಲ್ಲಿ ಹೊಯ್ಸಳರು (೧೧) ಉಚ್ಚಂಗಿದುರ್ಗದಲ್ಲಿ ಪಾಂಡ್ಯರು. ವಿಕ್ರಮನ ರಾಜ್ಯದಲ್ಲಿ ಮೂರು ನಾಲ್ಕು ಮಹಾಮಂಡಲೇಶ್ವರರು ಇರುತ್ತಿದ್ದರು.

**ಜಯಸಿಂಹನ ದ್ರೋಹ.**

**ವಿಕ್ರಮಾದಿತ್ಯನ ಮಾಂಡಲಿಕರು.**

ಇ. ಸ. ೧೦೮೦ರಿಂದ ಮುಂದೆ ೪೭ ವರ್ಷಗಳ ವರೆಗೆ ವಿಕ್ರಮನು ಶಾಂತತೆಯಿಂದ ಆಳಿದನು. ಇವನ ಪ್ರಜೆಗಳು ಸೌಖ್ಯದಿಂದಿದ್ದರು. ಈತನು ಕವಿಗಳಿಗೂ ಪಂಡಿತರಿಗೂ ಉದಾರಾಶ್ರಯ ಕೊಟ್ಟಿದ್ದನು. ಕಾಶ್ಮೀರ ದೇಶದ ಬಿಲ್ಹಣನೆಂಬ ಕವಿಯು ಆಶ್ರಯ ಹುಡುಕುತ್ತ ಬಂದು ವಿಕ್ರಮನ ಆಸ್ಥಾನ ಕವಿಯಾದನು. ಹಿಂದೂಜನರ ಧರ್ಮ ನ್ಯಾಯಗಳ ಬಗ್ಗೆ ಸದ್ಯಕ್ಕೂ ಮಾನ್ಯವಾಗಿರುವ ಮಿತಾಕ್ಷರವೆಂಬ ಗ್ರಂಥವನ್ನು ಬರೆದ ವಿಜ್ಞಾನೇಶ್ವರನೆಂಬ ಪಂಡಿತನೂ ವಿಕ್ರಮನ ಆಶ್ರಯದಲ್ಲಿಯೇ ಇದ್ದನು. ಹಿಂದಿನ ಕಾಲದ ಕನ್ನಡ ಅರಸರಂತೆ ಇವನು ಎಲ್ಲ ಧರ್ಮಗಳಿಗೂ ಉತ್ತೇಜನ ಕೊಟ್ಟನು. ಈತನ ತಂದೆಯು ಶಿವಪೂಜಕನು; ವಿಕ್ರಮನು ವಿಷ್ಣುಪೂಜಕನಿದ್ದಂತೆ ಕಾಣುತ್ತದೆ. ವಿಕ್ರಮನು ಕೆಲವು ಜಿನಾಲಯಗಳನ್ನು ಕಟ್ಟಿಸಿದನು. ಬೌದ್ಧ ವಿಹಾರಗಳಿಗೆ ಭೂಮಿಗಳನ್ನು ಹಾಕಿ

**೪೭ ವರ್ಷ ಸುರಾಜ್ಯ.**

ಕೊಟ್ಟನು. ಈತನಿಗೆ ಮೂವರು ಮಕ್ಕಳು. ಇವರಲ್ಲಿ ೨ನೆಯವನಾದ ಸೋಮೇಶ್ವರನು ಇವನ ಬಳಿಕ ಕಲ್ಯಾಣದಲ್ಲಿ ಪಟ್ಟವೇರಿದನು.

ಇತಿಹಾಸದಲ್ಲಿ ವಿಕ್ರಮನು **೬ನೆಯ ವಿಕ್ರಮಾದಿತ್ಯನೆಂದು** ಹೆಸರಾಗಿರುವನು. ಇ. ಸ. ೧೦೭೬ರಲ್ಲಿ ಪಟ್ಟವೇರಿದ ಕೂಡಲೆ ಇವನು ತನ್ನ ಹೆಸರಿನ ಶಕವನ್ನು ಆರಂಭಿಸಿದನು. ಇದು ಬಹಳ ವರುಷ ನಡೆಯಲಿಲ್ಲ. ಈತನು ಅಣ್ಣನನ್ನು ತಳ್ಳಿ ಪಟ್ಟವೇರಿದರೂ ಸಾಮ್ರಾಜ್ಯವನ್ನು ಭದ್ರಪಡಿಸಿ ೫೨ ವರ್ಷಗಳ ವರೆಗೆ ಶಾಂತತೆಯಿಂದಾಳಿ ಕರ್ನಾಟಕದ ಕೀರ್ತಿಯನ್ನು **ಹಿಮಾಲಯ**ದಿಂದ **ರಾಮೇಶ್ವರ**ದ ವರೆಗೆ ಹಬ್ಬಿಸಿದನು.

ಹತ್ತನೆಯ ಶತಮಾನದ ಕೊನೆಗೆ ಗಂಗರು ಮುಗ್ಗಿದ ಬಳಿಕ **ಹೊಯ್ಸಾಲ**ರೆಂಬ ವೀರರು ಮೈಸೂರಿನ ಮಲೆನಾಡಿನಲ್ಲಿ ತಲೆಯೆತ್ತುತ್ತಿದ್ದರು. **ಅಂಗಡಿ** ಎಂಬದು ಇವರ ಮೊದಲಿನ ಊರು. ಗಂಗವಾಡಿಯು ಚೋಳರ ಕೈಸೇರಿತ್ತು. ೧೧ನೆಯ ಶತಮಾನದಲ್ಲಿ ಹೊಯ್ಸಾಲರು ಚಾಲುಕ್ಯರ ಮಾಂಡಲಿಕರಾದರು.

**ಹೊಯ್ಸಾಲ ಬಿಟ್ಟಿದೇವ.**

ಇ. ಸ. ೧೧೧೬ರಲ್ಲಿ ಬಿಟ್ಟೀದೇವನೆಂಬ ಹೊಯ್ಸಾಲನು ವಿಕ್ರಮಾದಿತ್ಯನ ಮಂಡಲೇಶ್ವರನಾದನು. ದ್ವಾರಸಮುದ್ರವು ಈ ಮೊದಲೇ ಹೊಯ್ಸಾಲರ ರಾಜಧಾನಿಯಾಗಿತ್ತು. ಚೋಳ ಚಾಲುಕ್ಯರ ಹಗೆತನದ ಹೊತ್ತು ಸಾಧಿಸಿ ಇವನು ಚೋಳರಿಂದ ಗಂಗವಾಡಿ ನೋಲಂಬವಾಡಿಗಳನ್ನು ಗೆದ್ದುಕೊಂಡು **ವೀರಗಂಗ**ನೆಂಬ ಬಿರುದು ಧರಿಸಿದನು. **ಗಂಗರಾಜ**ನೆಂಬ ಸರದಾರನು ಬಿಟ್ಟಿದೇವನಿಗೆ ಈ ಕಾರ್ಯದಲ್ಲಿ ಬಹಳ ನೆರವಾದನು. ಮುಂದೆ ಹತ್ತು ವರ್ಷಗಳಲ್ಲಿ ಇವನು ಮೈಸೂರು ಪ್ರಾಂತದ ದಕ್ಷಿಣದಲ್ಲಿದ್ದ ಸಣ್ಣ ಪುಟ್ಟ ಅರಸರ ಸೀಮೆಗಳನ್ನೆಲ್ಲ ವಶಮಾಡಿಕೊಂಡನು. ಉತ್ತರದಲ್ಲಿ ಇವನ ಆಟ ಸಾಗಲಿಲ್ಲ. ಆದರೂ ಬಿಟ್ಟಿದೇವನು ಸುಮ್ಮನೆ ಕೂಡ್ರಲಿಲ್ಲ. ಗೋವೆಯ ಕದಂಬರೂ ಕೊಲ್ಲಾಪುರದ ಸಿಲಾಹಾರರೂ ಈ ಸಮಯದಲ್ಲಿ ಸ್ವತಂತ್ರರಾಗಲಿಕ್ಕೆ ಯತ್ನಿಸಿದರು. ಗಂಗರಾಜನು ಕೃಷ್ಣೆಯ ವರೆಗೆ ಬಂದನು. ಆದರೆ ಕಲಬುರ್ಗೆಯ **೨ನೇ ಅಚುಗಿ** ಎಂಬ ಮಂಡಲೇಶ್ವರನು ಕನ್ನೇಗಲ ಎಂಬಲ್ಲಿ ಗಂಗರಾಜನನ್ನು ಸೋಲಿಸಿ ಓಡಿಸಿ, ಗೋವೆಯನ್ನು ಹಿಡಕೊಂಡನು. ಬಿಟ್ಟಿದೇವನು ವಿಕ್ರಮನ ಒಡೆತನವನ್ನೊಪ್ಪಿಕೊಂಡನು.

ವಿಕ್ರಮಾದಿತ್ಯನ ಮರಣದ ಬಳಿಕ (೧೧೨೬) **೩ನೇ ಸೋಮೇಶ್ವರ**ನು ಪಟ್ಟಕ್ಕೆ ಕುಳಿತನು. ಬಿಟ್ಟಿದೇವನು ಕೂಡಲೆ ಉತ್ತರದ ದಾಳಿಗಳನ್ನಾರಂಭಿಸಿ

ಮೈಸೂರ ಪ್ರಾಂತದ ಒಡೆತನಕ್ಕಾಗಿ ೧೧ ವರ್ಷ ಹೆಣಗಾಡಿದನು. ಇ. ಸ. ೧೧೩೭ರಲ್ಲಿ ದಕ್ಷಿಣದಲ್ಲಿ **ತಲಕಾಡವೂ** ಉತ್ತರದಲ್ಲಿ **ಬಂಕಾಪುರವೂ** ಇವನ ರಾಜಧಾನಿಗಳಾಗಿದ್ದವು. ೧೧೩೮ರಲ್ಲಿ ೩ನೇ ಸೋಮೇಶ್ವರನು ತೀರಿಕೊಂಡನು. ಇವನೊಡನೆಯೇ ಚಾಲುಕ್ಯರ ಘನತೆಯು ಹೋಯಿತು. ಬಿಟ್ಟಿದೇವನು ಉತ್ತರದ ಕಡೆಗೆ ಸಾಗಿಬಂದು **ಹಾನಗಲ್ಲವನ್ನು** ವಶಮಾಡಿಕೊಂಡು ಇ. ಸ. ೧೧೪೧ರ ವರೆಗೆ ಬಂಕಾಪುರದಲ್ಲಿ ಇದ್ದು ಅಲ್ಲಿಯೇ ತೀರಿಕೊಂಡನು. ಸದ್ಯದ ಮೈಸೂರ ಪ್ರಾಂತವನ್ನೂ ಅಲ್ಲಿಂದ ಬಂಕಾಪುರದ ವರೆಗಿರುವ ಸೀಮೆಯನ್ನೂ ವಸ್ತುತಃ ಆಳಿದರೂ ಇವನು ಕಡೆತನಕ ಸಿಂಹಾಸನವನ್ನೇರಲಿಲ್ಲ. ಚೋಳ ಚಾಲುಕ್ಯರ ಚಕ್ರವರ್ತಿಗಳಾಗಿದ್ದ ವಿಕ್ರಮ ಕುಲೋತ್ತುಂಗರಂಥ ವೀರನರಪಾಲರ ಕಾಲದಲ್ಲಿದ್ದರೂ ಇವನು ಹೊಯ್ಸಾಲರ ರಾಜ್ಯವನ್ನು ಕಲಿತನದಿಂದ ಸ್ಥಾಪಿಸಿ, ಜಾಣತನದಿಂದ ಸ್ಥಿರಪಡಿಸಿ, ಕರ್ನಾಟಕದಲ್ಲಿ ಹೆಸರಾದನು.

**ಬಿಟ್ಟಿದೇವನ ವಿಜಯ.**

ಗಂಗ ಅರಸರಂತೆ ಹೊಯ್ಸಾಲರೂ ಜೈನರು. ಬಿಟ್ಟಿದೇವನು ಇ. ಸ. ೧೧೧೭ರಲ್ಲಿ **ರಾಮಾನುಜಾಚಾರ್ಯರ** ಶಿಷ್ಯನಾಗಿ ಶ್ರೀವೈಷ್ಣವ ಮತವನ್ನು ಸ್ವೀಕರಿಸಿ **ವಿಷ್ಣುವರ್ಧನನೆಂಬ** ಹೆಸರು ಧರಿಸಿದನು. ಆದರೆ ಇವನು ಜೈನ ಮತವನ್ನು ತಿರಸ್ಕರಿಸಲಿಲ್ಲ. **ತಲಕಾಡು, ಬೇಲೂರ, ಬನ್ನೂರುಗಳಲ್ಲಿರುವ** ನಾರಾಯಣನ ದೇವಾಲಯಗಳನ್ನು ಉದ್ಧಾರ ಮಾಡಿದನು. ಈತನ ಹಿರೇ ಹೆಂಡತಿಯು ಜೈನಳಾಗಿಯೇ ಉಳಿದಳು. **ಶ್ರವಣಬೆಳಗೊಳದಲ್ಲಿ** ಈಕೆ ಕಟ್ಟಿಸಿದ ಬಸತಿಯು ಇನ್ನೂ ಇರುವದು. ರಾಜ್ಯಗಳಿಸುವದರಲ್ಲಿ ವಿಷ್ಣುವರ್ಧನನಿಗೆ ನೆರವಾದ ಗಂಗರಾಜನು ಜೈನನಿದ್ದನು. ಈತನ ನೆನಪಿಗಾಗಿ ಈತನ ಮಗನು **ಹಳೇಬೀಡಿನಲ್ಲಿ** ಒಂದು ಜಿನಾಲಯವನ್ನು ಕಟ್ಟಿಸಿದನು. ಚೋಳರು ಹಾಳುಮಾಡಿದ್ದ ಜಿನಾಲಯಗಳನ್ನು ತಿರುಗಿ ಕಟ್ಟಿಸಿ, ಗಂಗರಾಜನು ಹಳೇಬೀಡಿನ ವೈಭವವನ್ನು ಹೆಚ್ಚಿಸಿದನು. ವಿಷ್ಣುವರ್ಧನನು ಎಲ್ಲ ಧರ್ಮಗಳನ್ನು ಸಮವಾಗಿ ಎಣಿಸಿ ರಾಜಕಾರ್ಯದಲ್ಲಿ ಜಾಣತನವನ್ನು ತೋರಿಸಿದನು. ಇವನ ತರುವಾಯ ಪಟ್ಟವೇರಿದ ಇವನ ಮಗನ ಆಳಿಕೆಯಲ್ಲಿ ಮಹತ್ವದ ಸಂಗತಿಯು ಯಾವದೂ ಆಗಲಿಲ್ಲ.

**ಶ್ರೀವೈಷ್ಣವ ಮತ.**

೩ನೇ ಸೋಮೇಶ್ವರನ ತರುವಾಯ ೧೧೫೦ರ ವರೆಗೆ ಆಳಿದ **ಜಗದೇಕಮಲ್ಲನ** ಆಳಿಕೆಯಲ್ಲಿ **ತರಡವಾಡಿಯ** ಮುಖ್ಯ ಪಟ್ಟಣವಾಗಿದ್ದ **ಬಿಜಾಪುರದ**

ಮಂಡಲೇಶ್ವರನಾಗಿದ್ದ **ಬಿಜ್ಜಳನು** ಹೆಸರಿಗೆ ಬಂದನು. ಬಿಜ್ಜಳನ ಪರಾಕ್ರಮಕ್ಕೆ ಮೆಚ್ಚಿ, ಸೋಮೇಶ್ವರನು ಇವನನ್ನು ಬನವಾಸಿಯ ಮಂಡಲೇಶ್ವರನನ್ನಾಗಿ ನೇಮಿಸಿದ್ದನು. ಬಿಜ್ಜಳನು ಕಲ್ಯಾಣದಲ್ಲಿಯೇ ನಿಂತು ಪ್ರತಿನಿಧಿಗಳ ಮುಖಾಂತರ ಕೆಲಸ ನೋಡುತ್ತಿದ್ದನು. ಇ. ಸ. ೧೧೫೦ರಲ್ಲಿ ತೈಲಪನು ಪಟ್ಟವೇರಿದನು. ಈ ಸುಮಾರಿಗೆ ಚಾಲುಕ್ಯರ ಸಾಮ್ರಾಜ್ಯವು ತೀರ ದುರ್ಬಲವಾಗಿತ್ತು. ಸಣ್ಣ ದೊಡ್ಡ ಅರಸರು ಸ್ವತಂತ್ರರಾಗುತ್ತಿದ್ದರು. ರಾಜಧಾನಿಯಲ್ಲಿ ಬಿಜ್ಜಳನ ಗೌರವವು ಹೆಚ್ಚಿತು. ಇವನು ಸಾಮ್ರಾಜ್ಯದ ದಂಡನಾಯಕನಾದನು. ಇಷ್ಟರಲ್ಲಿ **ಪ್ರೋಳನೆಂಬ** ಕಲಿಯು **ವರಂಗೂಳದಲ್ಲಿ** ಕಾಕತೀಯರ ರಾಜ್ಯವನ್ನು ಸ್ಥಾಪಿಸಿ ಇ. ಸ. ೧೧೫೩ರಲ್ಲಿ ತೈಲಪನನ್ನು ಸೋಲಿಸಿದನು. ಸಾಮ್ರಾಜ್ಯಕ್ಕೆ ಒಳಗಿನಿಂದಲೂ ಹೊರಗಿನಿಂದಲೂ ಗಂಡಾಂತರ ಬಂದದ್ದನ್ನು ನೋಡಿ ತೈಲಪನು ಬಿಜ್ಜಳನ ಮರೆಹೊಕ್ಕನು. ಬಿಜ್ಜಳನು ರಾಜತಂತ್ರದಲ್ಲಿ ನಿಪುಣನಿದ್ದನು. ದಕ್ಷಿಣದ ಮಂಡಲೇಶ್ವರರು ಪ್ರಬಲರಾಗುತ್ತಿದ್ದದ್ದನ್ನು ನೋಡಿ, ಇವನು ಐವರು ರಾಜಕರಣಿಕರನ್ನು ನೇಮಿಸಿ, ಮಂಡಲೇಶ್ವರರ ಉತ್ಪನ್ನವೆಲ್ಲ ಅರಸನ ಸ್ವಂತ ನಜರಿನಲ್ಲಿರುವಂತೆ ಮಾಡಿ ಅವರನ್ನು ಅಂಕಿತದಲ್ಲಿಟ್ಟುಕೊಂಡನು. ಈ ತಂತ್ರದಿಂದಲೇ ಇವನು ಕಾಕತೀಯರನ್ನು ಕೈಯಲ್ಲಿಟ್ಟುಕೊಂಡನು. ಹೀಗೆ ಬಿಜ್ಜಳನು ಸಾಮ್ರಾಜ್ಯದ ಗಂಡಾಂತರವನ್ನು ತಪ್ಪಿಸಿದನು. ಇದರಿಂದ ಇವನ ಅಧಿಕಾರವು ಬಹಳ ಬೆಳೆಯಿತು. ತೈಲಪನು ತೀರಿದ ತರುವಾಯ ಹೆಸರಿಗೆ ಅರಸನಿರುವದು ಸಾಮ್ರಾಜ್ಯಕ್ಕೆ ಹಿತಕರವಲ್ಲೆಂಬದನ್ನು ಮನಗಂಡು ಇ. ಸ. ೧೧೬೩ರಲ್ಲಿ ಬಿಜ್ಜಳನು ಚಾಲುಕ್ಯರ ಸಿಂಹಾಸನವನ್ನೇರಿದನು. ವಿಕ್ರಮನ ಕಾಲದಿಂದ ಕೃತಜ್ಞತೆಯೊಡನೆ ಚಾಲುಕ್ಯರ ಗೌರವವನ್ನು ಕಾಯ್ದ ಸಿಂದರೂ ಪಾಂಡ್ಯರೂ ಬಿಜ್ಜಳನನ್ನು ವ್ಯರ್ಥವಾಗಿ ಎದುರಿಸಿದರು. ಆದರೂ ಬಿಜ್ಜಳನಿಂದ ಸಾಮ್ರಾಜ್ಯಕ್ಕೆ ಹಿತವೇ ಆಯಿತೆನ್ನಬಹುದು.

**ಬಿಜ್ಜಳ.**

**ವರಂಗೂಳದ ಪ್ರೋಳ.**

ಬಿಜ್ಜಳನು ಜೈನನಿದ್ದನು. ಆದರೂ ಎಲ್ಲ ಮತಗಳನ್ನು ಸಮವಾಗಿ ನೋಡುವನು. ಇವನ ದರಬಾರಿನಲ್ಲಿ ಬಸವೇಶ್ವರನೆಂಬ ಆರಾಧ್ಯ ಬ್ರಾಹ್ಮಣನು ಪ್ರಬಲನಾದನು. ಇವನು ಬಿಜ್ಜಳನ ಮುಖ್ಯ ಮಂತ್ರಿಯಾಗಿ, ಲಿಂಗವಂತಮತವನ್ನು ನೆಲೆಗೊಳಿಸಿ,

**ಲಿಂಗಾಯತ ಮತ.**

ಬಹಳ ಹಣ ಖರ್ಚು ಮಾಡಿ, ಬಹು ಜನರಿಗೆ ತನ್ನ ಮತದ ದೀಕ್ಷೆಯನ್ನು ಕೊಟ್ಟನು; ಈ ಕಾರಣದಿಂದ ಬಿಜ್ಜಳನಿಗೂ ಬಸವೇಶ್ವರನಿಗೂ ಜಗಳ ಹುಟ್ಟಿತು. ಬಸವೇಶ್ವರನು ಬಿಜ್ಜಳನನ್ನು ಕೊಲ್ಲಿಸಿದನು. ಬಿಜ್ಜಳನ ಮಗನು ಅವನನ್ನು ಹಿಡಿಯ ಹೊರಟನು. ಆದರಿಂದ ಬಸವೇಶ್ವರನು **ಉಳವಿಗೆ** ಹೋಗಿ ಅಲ್ಲಿ ಮಡಿದನು. ಬಿಜ್ಜಳನ ತರುವಾಯ ಅವನ ಮಕ್ಕಳು ಇ. ಸ. ೧೧೮೩ರ ವರೆಗೆ ಆಳಿದರು. ಇಷ್ಟರಲ್ಲಿ ಬಿಜ್ಜಳನ ದಳವಾಯಿಗಳಲ್ಲೊಬ್ಬನು ತೈಲಪನ ಮಗನಾದ **೪ನೇ ಸೋಮೇಶ್ವರನಿಗೆ** ಕಲ್ಯಾಣದಲ್ಲಿ ಪಟ್ಟಗಟ್ಟಿದನು. ಇ. ಸ. ೧೧೮೯ರಲ್ಲಿ ಇವನ ಮಂಡಲೇಶ್ವರರಲ್ಲಿ ಕೆಲವರು ದಂಗೆ ಮಾಡಿದರು. ಆಗ ಸೋಮೇಶ್ವರನು ರಾಜ್ಯದ ವಾಯವ್ಯದ ಕಡೆಗೆ ಓಡಿಹೋದನು. ಈ ವರುಷ ಚಾಲುಕ್ಯರ ವಂಶವು ಮುಗ್ಗಿತು.

**ವೀರಬಲ್ಲಾಳ.**

ಈ ಸುಮಾರಿಗೆ ದೇವಗಿರಿಯ ಯಾದವರೂ ದ್ವಾರಸಮುದ್ರದ ಹೊಯ್ಸಾಲರೂ ಪ್ರಬಲರಿದ್ದರು. ಯಾದವರ **ಭಿಲ್ಲಮನು** ವಾಯವ್ಯದಿಂದಲೂ ವಿಷ್ಣುವರ್ಧನನ ಮೊಮ್ಮಗನಾದ ಹೊಯ್ಸಾಲರ **ವೀರ ಬಲ್ಲಾಳನು** ದಕ್ಷಿಣದಿಂದಲೂ ಸೀಮೆಗಳನ್ನು ಗೆಲ್ಲುತ್ತ ಬಂದರು. **ಸೊರಟೂರು** ಎಂಬಲ್ಲಿ ಎರಡೂ ಸೇನೆಗಳಿಗೆ ದೊಡ್ಡ ಕಾಳಗ ವಾಯಿತು. ಭಿಲ್ಲಮನು ಪೂರ್ಣವಾಗಿ ಸೋತನು. ಬಲ್ಲಾಳನು ಲಕ್ಕುಂಡಿ ಯನ್ನು ತಕ್ಕೊಂಡು ಕೃಷ್ಣೆಯ ವರೆಗಿದ್ದ ಸೀಮೆಯನ್ನು ವಶಮಾಡಿಕೊಂಡನು. ಇನ್ನು ಹೊಯ್ಸಾಲರ ಒಡೆತನವನ್ನು ಎದುರಿಸುವವರು ಯಾರೂ ಉಳಿಯಲಿಲ್ಲ. ಆದ್ದರಿಂದ ಇ. ಸ. ೧೧೯೧ರಲ್ಲಿ ವೀರಬಲ್ಲಾಳನು ಸ್ವತಂತ್ರನಾಗಿ **ಸಮಸ್ತಭುವನಾಶ್ರಯ, ಮಹಾರಾಜಾಧಿರಾಜ, ಪರಮೇಶ್ವರ** ಎಂಬ ಬಿರುದುಗಳನ್ನು ಧರಿಸಿದನು.

**ಯಾದವರೂ ಹೊಯ್ಸಾಲರೂ.**

ಈ ಮೇರೆಗೆ ೧೨ನೆಯ ಶತಮಾನದ ಕೊನೆಯಲ್ಲಿ ಚಾಲುಕ್ಯರ ಸಾಮ್ರಾಜ್ಯವು ಅಸ್ತವಾಗಿ ಕರ್ನಾಟಕದಲ್ಲಿ ಯಾದವ ಹೊಯ್ಸಾಲರ ಒಡೆತನವು ಉಂಟಾಯಿತು. ಹೊಯ್ಸಾಲರು ದಕ್ಷಿಣದ ಕಡೆಗೆ ತಮ್ಮ ರಾಜ್ಯವನ್ನು ಬೆಳಿಸುತ್ತ ಹಳೇಬೀಡಿನಲ್ಲಿ ೧೩.೧೦ರ ವರೆಗೆ ಆಳಿದರು. ಕಡೆಯವನೂ ದುರ್ದೈವಿಯೂ ಆದ ಬಲ್ಲಾಳ ರಾಜನನ್ನು ಮಲಿಕಕಾಫೂರನು ಗೆದ್ದು, ದ್ವಾರಸಮುದ್ರವನ್ನು ಸುಲಿದು ಹಾಳು ಮಾಡಿದನು. ಯಾದವರು ಯಾವತ್ತು ಮಹಾರಾಷ್ಟ್ರವನ್ನೂ ತುಂಗಭದ್ರೆಯ

ವರೆಗೆ ಕರ್ನಾಟಕದ ಉತ್ತರ ಭಾಗವನ್ನೂ ಇ. ಸ. ೧೨೭೧ರ ವರೆಗೆ ಆಳಿದರು. ಕಡೆಯ ಅರಸನಾದ ರಾಮರಾಜನು ದಿಲ್ಲಿಯ ಅಲ್ಲಾವುದ್ದೀನನ ಮಾಂಡಲಿಕನಾದನು.

---

## ೮ನೇ ಪ್ರಕರಣ.

### ಚಾಲುಕ್ಯರ ಕಾಲದ ರಾಜ್ಯವ್ಯವಸ್ಥೆ, ಧರ್ಮ, ನಡಾವಳಿ.

ಚಾಲುಕ್ಯರ ಸಾಮ್ರಾಜ್ಯದ ರಾಜ್ಯವ್ಯವಸ್ಥೆಯು ಮೇಲಾದದ್ದಿತ್ತು. ಒಂದು ದೊಡ್ಡ ಹಳ್ಳಿಗಾಗಲಿ ಕೆಲವು ಸಣ್ಣ ಹಳ್ಳಿಗಳಿಗೆ ಕೂಡಿ ಆಗಲಿ ಒಂದು ಗ್ರಾಮಸಂಘವಿರುತ್ತಿತ್ತು. ಇದಕ್ಕೆ ಮಹಾಸಭೆಯೆಂದೂ ಹೆಸರು. ಇಂಥ ಮಹಾಸಭೆಯುಳ್ಳ ಎಷ್ಟೋ ಊರುಗಳಿಗೆ ಕೂಡಿ ನಾಡು ಇಲ್ಲವೆ ವಿಷಯ ಎನ್ನುತ್ತಿದ್ದರು. ಇಂಥ ಹಲವು ನಾಡುಗಳು ಕೂಡಿ ಮಂಡಲವೆನಿಸುತ್ತಿತ್ತು. ಈ ಮಂಡಲದೊಳಗಿನ ಭಾಗಗಳಿಗೆ ವಾಡಿಗಳೆಂಬ ಹೆಸರು. ಬಹುತರವಾಗಿ ಸಣ್ಣ ಸಣ್ಣ ಸೀಮೆಗಳನ್ನು ಅವುಗಳಲ್ಲಿರುವ ಹಳ್ಳಿಗಳ ಸಂಖ್ಯೆಯಿಂದಾಗಲಿ ಇಲ್ಲವೆ ಅವುಗಳ ಉತ್ಪನ್ನದಿಂದಾಗಲಿ ಕರೆಯುತ್ತಿದ್ದಂತೆ ತೋರುತ್ತದೆ. ಯಾಕಂದರೆ ಗಂಗವಾಡಿಗೆ ೯೬೦೦೦, ಬನವಾಸಿಗೆ ೧೨೦೦೦, ನೋಲಂಬವಾಡಿಗೆ ೩೨೦೦೦, ಎಂಬ ಹೆಸರುಗಳಿದ್ದವು. ತುರ್ಗದ ಉತ್ತರ ಭಾಗದಲ್ಲಿರುವ ಪ್ರದೇಶಕ್ಕೆ ಈಗಲೂ ಏಳು ಸಾವಿರ ನಾಡು ಎಂಬ ಹೆಸರು ಉಳಿದಿರುವದು.

**ಗ್ರಾಮ, ಮಂಡಲಿ.**

ಗ್ರಾಮಸಂಘಗಳು ಊರ ವ್ಯವಸ್ಥೆಗೆ ಸಂಬಂಧಿಸುವ ಯಾವತ್ತೂ ಕೆಲಸಗಳನ್ನು ಸ್ವತಂತ್ರವಾಗಿ ನೋಡಿಕೊಳ್ಳುತ್ತಿದ್ದವು. ನಾಡಿನ ಅಧಿಕಾರಿಗಳು ಇವರ ಕಾರ್ಯಗಳನ್ನು ಮೇಲ್ವಿಚಾರಿಸುತ್ತಿದ್ದರು. ಊರ ಹೊಲಗಳೆಲ್ಲ ಗ್ರಾಮಸಂಘದವರ ಒಡೆತನಕ್ಕೆ ಸೇರಿದ್ದವು. ಇವರು ಹೊಸ ಭೂಮಿಗಳನ್ನು ಸಾಗುಮಾಡಿಸುತ್ತಿದ್ದರು. ಪಡಬಿದ್ದ ಭೂಮಿಗಳನ್ನು ಹೊಸ ರೈತರಿಗೆ ಕೊಡುತ್ತಿದ್ದರು. ರೈತರಿಗೆ ಯಾವ ಬಗೆಯಿಂದಲೂ ತೊಂದರೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಅವರು ತಪ್ಪು ಮಾಡಿದರೆ ದಂಡ ಕಟ್ಟುತ್ತಿದ್ದರು. ಗುಡಿಗಳನ್ನು ನಡಿಸಲಿಕ್ಕೂ ಇತರ ಸಾರ್ವ

**ಮಹಾಸಭೆಯ ಕೆಲಸಗಳು.**

ಜನಿಕ ಕೆಲಸಗಳಿಗೂ ಅರಸರಾಗಲಿ ಬೇರೆ ಯಾರಾಗಲಿ ಹೊಲ ಹಚ್ಚಿಕೊಟ್ಟರೆ ಅದರ ವ್ಯವಸ್ಥೆಯನ್ನು ಮಾಡುತ್ತಿದ್ದರು. ಎಲ್ಲ ಬಗೆಯ ಕರಗಳ ವಸೂಲಿಯ ಕೆಲಸವು ಇವರಿಗೇ ಒಪ್ಪಿತ್ತು. ಕರ ಕೊಡದ ರೈತರ ಹೊಲಗಳನ್ನು ಜಪ್ತು ಮಾಡುವ ಅಧಿಕಾರವೂ ಇವರಿಗೇ ಇತ್ತು. ಈ ಹಲವು ಕೆಲಸಗಳನ್ನು ಮಾಡುವದಕ್ಕಾಗಿ ಮಹಾಸಭೆಯವರು ಉಪಸಭೆಗಳನ್ನು ನೇಮಿಸಿಕೊಳ್ಳುತ್ತಿದ್ದರು. ನಾಡಿನ ಅಧಿಕಾರಿಗಳು ಇವೆಲ್ಲ ಕೆಲಸಗಳ ಬಗ್ಗೆ ಇವರು ಇಟ್ಟ ಲೆಕ್ಕಪತ್ರಗಳನ್ನು ಮೇಲಿಂದ ಮೇಲೆ ಪರೀಕ್ಷಿಸುತ್ತಿದ್ದರು. ಊರಲ್ಲಿ ನ್ಯಾಯ ತೀರಿಸುವ ಕೆಲಸವನ್ನೂ ಈ ಮಹಾಸಭೆಯವರೇ ಮಾಡುತ್ತಿದ್ದರು. ಈ ಬಗ್ಗೆ ಇವರಿಗೆ ಬಹಳ ಅಧಿಕಾರವಿದ್ದಂತೆ ತೋರುತ್ತದೆ. ಬಹುತರವಾಗಿ ವರುಷಕ್ಕೊಮ್ಮೆ ಮಹಾಸಭೆಯ ಸಭಿಕರು ಊರ ಜನರಿಂದ ಆರಿಸಲ್ಪಡುತ್ತಿದ್ದರು. ಇದರಿಂದ ಊರೊಳಗಿರುವ ಯೋಗ್ಯರಾದ ಬಹುತರ ಜನರಿಗೆ ಕೆಲಸಗಳನ್ನು ಮಾಡಲಿಕ್ಕೆ ಅನುವು ದೊರೆಯುತ್ತಿತ್ತು.

**ಅಧಿಕಾರಿಗಳು.**

ಪ್ರತಿಯೊಂದು ಮಂಡಲದಲ್ಲಿ ಒಬ್ಬ ಮಂಡಲಾಧೀಶ್ವರನು ಇರುತ್ತಿದ್ದನು. ಅರಸರ ಅಣ್ಣತಮ್ಮಂದಿರೂ ಸಮೀಪಸಂಬಂಧಿಕರೂ ಈ ಅಧಿಕಾರವನ್ನು ವಹಿಸುತ್ತಿದ್ದರು. ವಿಕ್ರಮಾದಿತ್ಯನ ಆಳಿಕೆಯಲ್ಲಿ ಜಯಸಿಂಹನು ತಿರುಗಿಬಿದ್ದ ಒಳಿಕ ಆಯಾ ಪ್ರಾಂತದ ರಾಜವಂಶದ ಮುಖ್ಯ ಪುರುಷರೇ ಸಾಮ್ರಾಜ್ಯದ ಆಯಾ ಭಾಗಗಳ ಮಂಡಲಾಧೀಶ್ವರರಾಗಿ ನೇಮಿಸಲ್ಪಡುತ್ತಿದ್ದರು. ಚಾಲುಕ್ಯರಲ್ಲಿ ರಾಜಪುತ್ರಿಯರೂ ಈ ಮಹತ್ವದ ಅಧಿಕಾರದಲ್ಲಿದ್ದರು. ೧ನೇ ಸೋಮೇಶ್ವರನ ಕಕ್ಕಿಯಾದ ಅಕ್ಕಾದೇವಿಯು ಕಿಸುನಾಡನ್ನು ಆಳುತ್ತಿದ್ದಳು. ಈತನ ಹಾಗೂ ಈತನ ಮುಂದೆ ಆಳಿದ ಅರಸರ ರಾಣಿಯರು ಸ್ವಂತವಾಗಿಯಾಗಲಿ ಪ್ರತಿನಿಧಿಗಳ ಮುಖಾಂತರವಾಗಿಯಾಗಲಿ ಈ ಕೆಲಸವನ್ನು ನೋಡುತ್ತಿದ್ದರು. ವಿಕ್ರಮಾದಿತ್ಯನ ಒಬ್ಬ ರಾಣಿಯು ಕಲ್ಯಾಣಪುರದ ರಾಜ್ಯವ್ಯವಸ್ಥೆಯನ್ನು ಮಾಡುತ್ತಿದ್ದಳು. ಅರಸನು ದಿನಾಲು ರಾಜ್ಯದಾಡಳಿತದ ಕೆಲಸವನ್ನು ಮಾಡುತ್ತಿದ್ದನು. ಈತನಿಗೆ ಮುಖ್ಯ ಮಂತ್ರಿಯಲ್ಲದೆ ನಾಲ್ಕೈದು ಅಧಿಕಾರಸ್ಥರು ಈ ಕೆಲಸದಲ್ಲಿ ನೆರವಾಗುತ್ತಿದ್ದರು. ಸಂಧಿವಿಗ್ರಹಮಂತ್ರಿ, ದಂಡನಾಯಕ, ರಹಸ್ಯಾಧಿಕಾರಿ, ವಿದ್ಯಾಧಿಕಾರಿ, ಓಲೆಯಕಾರ ಇವರೆಲ್ಲರು ಮುಖ್ಯ ಅಧಿಕಾರಿಗಳಿದ್ದಂತೆ ತೋರುತ್ತದೆ. ಓಲೆಯಕಾರನು ರಾಜಶಾಸನಗಳ ವ್ಯವಸ್ಥೆಯನ್ನು ನೋಡುತ್ತಿದ್ದನು.

ಅರಸರ ಮುಖ್ಯ ಉತ್ಪನ್ನವು ಭೂಮಿಯ ಕಂದಾಯವೇ ಆಗಿತ್ತು. ಇದಲ್ಲದೆ ಹಲವು ತರದ ಕರಗಳು ಇದ್ದವು. ಭೂಮಿಯ ಉತ್ಪನ್ನದ ಆರನೇ ಭಾಗವು ಹಣದ ರೂಪದಿಂದಾಗಲಿ ಪೈರಿನ ರೂಪದಿಂದಾಗಲಿ ಬರುತ್ತಿತ್ತು. ಈ ಉತ್ಪನ್ನವನ್ನು ದಿವಾಣಿ ಅಧಿಕಾರಸ್ಥರ ಸಂಬಳ, ಸೇನೆಯ ಖರ್ಚು, ಗುಡಿ, ಪಟ್ಟಣ, ಕೆರೆಕಾಲುವೆಗಳ ಕಟ್ಟಡ ಈ ಮೊದಲಾದ ಸಾರ್ವಜನಿಕ ಕೆಲಸಗಳಿಗೆ ಉಪಯೋಗಿಸುತ್ತಿದ್ದರು.

**ಉತ್ಪನ್ನದ ಬಾಬುಗಳು.**

ಸೈನ್ಯದಲ್ಲಿ ಅರಸನ ಅಂಗರಕ್ಷಕರು, ಬಿಲ್ಲುಗಾರರು, ರಾಹುತರು, ಗಜಸೈನಿಕರು ಎಂಬ ಭಾಗಗಳಿದ್ದವು. ಒಕ್ಕಲಿಗರಿಗೆ ದಂಡಿನಲ್ಲಿ ಸೇರುವ ಅಧಿಕಾರವಿರಲಿಲ್ಲ. ಮಹಾಮಂಡಲೇಶ್ವರರು ಬಹುತರವಾಗಿ ಸೇನಾಧಿಪತಿಗಳಾಗಿದ್ದರು. ಇವರು ಯುದ್ಧಕಾಲದಲ್ಲಿ ತಮ್ಮ ಸೇನೆಗಳನ್ನು ತೆಗೆದುಕೊಂಡು ಬರುತ್ತಿದ್ದರು. ಅರಸರ ಹಿರಿಯ ಮಗನು ಯುವರಾಜನಾಗಿ ಯುದ್ಧಗಳಲ್ಲಿ ತೊಡಗುತ್ತಿದ್ದನು. ಅರಸರು ಛತ್ರ, ಚಾಮರ, ಪತಾಕೆಗಳನ್ನೂ ಬೊಕ್ಕಸವನ್ನೂ ಸ್ತ್ರೀಯರನ್ನೂ ಕರಕೊಂಡು ಯುದ್ಧಭೂಮಿಗೆ ಹೋಗುತ್ತಿದ್ದರು. ಜಯವೊದಗಿದ ಕೂಡಲೆ ಇವರು ಜಯಮಾಲೆಯನ್ನು ಧರಿಸುತ್ತಿದ್ದರು. ಯುದ್ಧಗಳಲ್ಲಿ ಶತ್ರುಗಳು ಅರಸರ ಬೊಕ್ಕಸವನ್ನು ಸೂರೆಗೊಳ್ಳುತ್ತಿದ್ದರು. ಆದರೆ ಒಕ್ಕಲಿಗನನ್ನೂ ಕೈಗಾರಿಕೆಯವರನ್ನೂ ತಡವುತ್ತಿರಲಿಲ್ಲ.

**ಸೈನ್ಯ.**

ಅರಸರು ರಾಜಧಾನಿಗಳಲ್ಲಿರುತ್ತಿದ್ದರು. ರಾಜ್ಯವ್ಯವಸ್ಥೆಯು ಸುಸೂತ್ರವಾಗಿ ಸಾಗಬೇಕೆಂದು ಒಂದಕ್ಕಿಂತ ಹೆಚ್ಚು ರಾಜಧಾನಿಗಳನ್ನು ಮಾಡಿಕೊಳ್ಳುತ್ತಿದ್ದರು. ಬಹುಶಃ ಇವು ಮಂಡಲಾಧಿಪತಿಗಳಿರುವ ಸ್ಥಳಗಳಾಗಿದ್ದವು.

**ರಾಜಧಾನಿಗಳು.**

ಚಾಲುಕ್ಯರ ಕಾಲದಲ್ಲಿ ಜೈನಮತವು ಬಹು ಪ್ರಬಲವಾಗಿತ್ತು. ಅರಸರು ಮಾತ್ರ ಎಲ್ಲ ಧರ್ಮಗಳಿಗೂ ಸಹಾಯ ಮಾಡುತ್ತಿದ್ದರು. ಅರಸರೂ ಶ್ರೀಮಂತರೂ ಹೊಸ ಗುಡಿಗಳನ್ನು ಕಟ್ಟಿಸುವದರಲ್ಲಿಯೂ ಜೀರ್ಣವಾದವುಗಳನ್ನು ಉದ್ಧಾರಮಾಡುವದರಲ್ಲಿಯೂ ಬಹಳ ಮನಸುಹಾಕುತ್ತಿದ್ದರು. ಹಳೇಬೀಡಿನಲ್ಲಿರುವ ಹೊಯ್ಸಾಲೇಶ್ವರನ ಅಲೌಕಿಕ ದೇವಾಲಯವನ್ನು ಕೇಟಮಲ್ಲನೆಂಬ ಒಬ್ಬ ವರ್ತಕನು ಕಟ್ಟಿಸಿದನು. ಇದನ್ನು ಕಟ್ಟುವ ಕೆಲಸವು ೮೬ ವರುಷ ನಡೆದಿತ್ತಂತೆ. ಶಂಕರಾಚಾರ್ಯನು

**ಧರ್ಮ.**

ಲನೇ ಶತಮಾನದಲ್ಲಿಯೇ ಶ್ರಿಂಗೇರಿಯಲ್ಲಿ ಒಂದು ಶೈವ ಮಠವನ್ನು ಸ್ಥಾಪಿಸಿದ್ದ ರಿಂದ ಜೈನಧರ್ಮದ ಏರಿಕೆಯು ಕಡಿಮೆಯಾಯಿತು. ಬ್ರಾಹ್ಮಣಧರ್ಮದ ಚೋಳರು ೧೧ನೇ ಶತಮಾನದ ಆರಂಭದಲ್ಲಿ ಗಂಗಮಂಡಲವನ್ನು ವಶಮಾಡಿ ಕೊಂಡದ್ದರಿಂದಲೂ, ೧೨ನೇ ಶತಮಾನದ ಆದಿಯಲ್ಲಿ ಬಿಟ್ಟಿದೇವನು ಶ್ರೀವೈಷ್ಣವ ಮತವನ್ನು ಸ್ವೀಕರಿಸಿದ್ದರಿಂದಲೂ, ಅದೇ ಶತಮಾನದ ಕೊನೆಯಲ್ಲಿ ಬಿಜ್ಜಳನ ಕಾಲದಲ್ಲಿ ಲಿಂಗಾಯತ ಮತವು ತಲೆದೋರಿದ್ದರಿಂದಲೂ ಜೈನಮತವು ಬಹಳ ಕಳೆಗುಂದಿತು. ಚಾಲುಕ್ಯರು ವಿಷ್ಣುಪೂಜಕರಿದ್ದರು. ಬ್ರಾಹ್ಮಣಧರ್ಮದ ಎರಡು ಮತಗಳಲ್ಲಿಯೂ ಕಲಹಗಳು ನಡೆಯುತ್ತಿದ್ದವು. ಈ ಕಲಹಗಳನ್ನು ಹೊಯ್ಸಾಲ ಅರಸರು ಎಷ್ಟು ಜಾಣತನದಿಂದ ತೀರಿಸುತ್ತಿದ್ದರೆಂಬದಕ್ಕೆ ಹರಿ ಹರದಲ್ಲಿರುವ ಹರಿಹರೇಶ್ವರನ ದೇವಾಲಯವೇ ಸಾಕ್ಷಿಯಾಗಿದೆ. ಅಲ್ಲಿ ಹರಿ ಯೂ (ವಿಷ್ಣು) ಹರನೂ (ಶಿವ) ಒಂದೇ ಆದ್ದರಿಂದ ದೇವರ ಒಂದೇ ಮೂರ್ತಿ ಯನ್ನು ಸ್ಥಾಪಿಸಿದ್ದಾರೆ.

**ಕಟ್ಟಡಗಳು.**

ಶಿಲ್ಪವಿದ್ಯೆಯು ಚಾಲುಕ್ಯರ ಕಾಲದಲ್ಲಿ ಪರಮಾವಧಿಯನ್ನು ಹೊಂದಿತ್ತು. ಹೊಯ್ಸಾಲರ ರಾಜಧಾನಿಯಾಗಿದ್ದ ಹಳೇಬೀಡಿನಲ್ಲಿರುವ ಹೊಯ್ಸಾಲೇಶ್ವರ, ಕೇದಾರೇಶ್ವರ ಗುಡಿಗಳೂ ಬೇಲೂರಿನಲ್ಲಿರುವ ಚನ್ನಕೇಶ ವನ ದೇವಾಲಯವೂ ಚಾಲುಕ್ಯಶಿಲ್ಪಮಾದರಿಯ ಸದ್ಯಕ್ಕೆ ಉಳಿದ ಗುಡಿಗಳಲ್ಲಿ ಹೆಸರಾದವಿರುವವು. ಶಿಲ್ಪಶಾಸ್ತ್ರದಲ್ಲಿ ಪ್ರಖ್ಯಾತನಾದ ಫರ್ಗಸನ್ನನೆಂಬ ಇಂಗ್ಲಿಷ ಪಂಡಿತನು ಬೇಲೂರಿನ ಗುಡಿಯ ಬಗ್ಗೆ ಬರೆದದ್ದು:— "ಹಿಂದುಸ್ತಾನದ ಎಷ್ಟೋ ದೇವಾಲಯಗಳಲ್ಲಿ ಇರುವ ಕೆತ್ತಿಗೆಯ ಕೆಲಸದಲ್ಲಿ ಕಾಣುವ ಕಲ್ಪನಾಡಂಬರವೂ ವಿವರವೈಚಿತ್ರ್ಯವೂ ಭೂಮಂಡಲದಲ್ಲಿ ಬೇರೆ ಎಲ್ಲಿಯೂ ದೃಷ್ಟಿಗೆ ಬೀಳುವದಿಲ್ಲ; ಆದರೆ ಈ ಗುಡಿಯ ಪ್ರತಿಯೊಂದು ಮಂಟಪದಲ್ಲಿ ಕಾಣುವ ಕೆತ್ತಿಗೆಯ ಕೆಲಸದಲ್ಲಿ ಶಿಲ್ಪಿಗರು ತೋರಿಸಿದ ತಾಳ್ಮೆ ಯನ್ನೂ ಚಾತುರ್ಯವನ್ನೂ ನಾನು ಭೂಮಂಡಲದ ಬೇರೆ ಯಾವ ಕಟ್ಟಡ ಗಳಲ್ಲಿಯೂ ನೋಡಿಲ್ಲ." ಹಳೇಬೀಡಿನ ಕೇದಾರೇಶ್ವರನ ಗುಡಿಯ ಬಗ್ಗೆ ಈತನು ಅನ್ನುವದೇನಂದರೆ "ಇದು ಸಣ್ಣ ದೇವಾಲಯವು; ಆದರೆ ಹಿಂದುಸ್ತಾನದ ಶಿಲ್ಪಿಗರು ಎಂಥ ಕೆತ್ತಿಗೆಯ ಕೆಲಸವನ್ನು ಮಾಡಬಲ್ಲರೆಂಬದು ಇದರ ಹೊರತು ಬೇರೆ ಯಾವ ಗುಡಿಯನ್ನು ಪರೀಕ್ಷಿಸಿದರೂ ತಿಳಿಯದು". ಚಾಲುಕ್ಯಶಿಲ್ಪ ಕಲೆಯ ಮಾದರಿಯ ಸಣ್ಣ ದೊಡ್ಡ ಅನೇಕ ಗುಡಿಗಳನ್ನು ಕಟ್ಟಿ, ಜಕ್ಕಣಾ

ಚಾರ್ಯನೆಂಬ ಶಿಲ್ಪಿಗನೂ ಆತನ ಮಗನೂ ಕರ್ನಾಟಕದಲ್ಲಿ ಹೆಸರಾಗಿರುವರು. ಆದರೆ ಇವರ ಬಗ್ಗೆ ಹೆಚ್ಚಿನ ಮಾಹಿತಿಯು ದೊರೆತಿಲ್ಲ.



ಹಳೇಬೀಡ ದೇವಸ್ಥಾನ.

**ಕವಿಗಳು.**

ಅರಸರು ಕವಿಗಳಿಗೂ ಪಂಡಿತರಿಗೂ ಉದಾರಾಶ್ರಯ ಕೊಡುತ್ತಿದ್ದರು. ಚಾಲುಕ್ಯರ ಆಳಿಕೆಯಲ್ಲಿ ಉತ್ತರ ಹಿಂದುಸ್ತಾನದಲ್ಲಿ ಯಾವ ಸಾರ್ವಭೌಮನೂ ಬಹುಕಾಲ ಆಳಲಿಲ್ಲ, ಆದ್ದರಿಂದ ದೂರ ದೂರ ದೇಶದ ಕವಿಗಳು ಇಲ್ಲಿಗೆ ಬಂದು ವಿದ್ಯಾಪತಿಗಳಾಗಿ ನಿಂತರು. ಬಿಲ್ಹಣನು ವಿಕ್ರಮಾದಿತ್ಯನ ಆಸ್ಥಾನಕವಿಯಾಗಿದ್ದನು. ರನ್ನನೆಂಬ ಕನ್ನಡ ಕವಿಯು ತೈಲಪನ ವಿದ್ಯಾಚಕ್ರವರ್ತಿಯಾಗಿದ್ದು ಛತ್ರ ಚಾಮರಗಳ ಬಹುಮಾನವನ್ನು ಪಡೆದಿದ್ದನು. ಆದಿಪಂಪ, ನಾಗಚಂದ್ರ, ರುದ್ರಭಟ್ಟ, ಜನ್ನ, ಹರಿಹರ, ದುರ್ಗಸಿಂಹ, ನಾಗವರ್ಮ ಮೊದಲಾದ ಕನ್ನಡ ಕವಿಗಳು ಚಾಲುಕ್ಯರ ಕಾಲದಲ್ಲಿಯೇ ಆಗಿಹೋದರು.

ಸದ್ಯಕ್ಕೆ ಇಲ್ಲದ ವಿಲಕ್ಷಣವಾದ ನಡಾವಳಿಗಳು ಆಗ ರೂಢಿಯಲ್ಲಿದ್ದವು. ಜೈನರು ಮರಣಾಸನ್ನರಾದಾಗ ಸಲ್ಲೇಖನ ವ್ರತವನ್ನು ಕೈಕೊಂಡು ಉಪವಾಸ

ದಿಂದ ಪ್ರಾಣ ಬಿಡುತ್ತಿದ್ದರು. ೧ನೇ ಸೋಮೇಶ್ವರನು ಕೆಟ್ಟ ಜ್ವರ ಬಂದದ್ದರಿಂದ ಇ. ಸ. ೧೦೬೮ರಲ್ಲಿ ತುಂಗಭದ್ರೆಯಲ್ಲಿ ನಡೆದುಹೋಗಿ ಪ್ರಾಣತ್ಯಾಗ ಮಾಡಿದನು. ಗಂಡನು ಸತ್ತ ಕೂಡಲೆ ಆತನ ಚಿತೆಯಲ್ಲಿ ಹಾರಿ ಸುಟ್ಟುಕೊಳ್ಳುವ ರೂಢಿಯು ಈ ಸಮಯದಲ್ಲಿತ್ತು. ಈ ವ್ರತವನ್ನು ಕೈಕೊಳ್ಳುವವರ ಬಗ್ಗೆ ಜನರು ಬಹಳ ಗೌರವ ತೋರಿಸುತ್ತಿದ್ದರು. ಸತಿಹೋದ ಸ್ತ್ರೀಯರ ನೆನಪಿಗಾಗಿ ಮಾಸತಿ (ಮಹಾಸತಿ) ಗಲ್ಲುಗಳನ್ನು ನಡಿಸುತ್ತಿದ್ದರು. ಇಂಥ ಕಲ್ಲುಗಳು ಕನ್ನಡ ನಾಡಿನಲ್ಲಿ ಬೇಕಾದಷ್ಟಿವೆ. ಅರಸರು ಸತ್ತರೆ ಅವರ ಚಿತೆಯ ಮೇಲೆ ಹಾರಿಕೊಂಡು ವೀರರು ಪ್ರಾಣ ಬಿಡುವ ರೂಢಿಯೂ ಇತ್ತು. ಇ. ಸ. ೯೧೨ರಲ್ಲಿ ಆಳಿದ ರಾಜಮಲ್ಲನೆಂಬ ಗಂಗ ಅರಸನ ಚಿತೆಯಲ್ಲಿ ಹಾರಿಕೊಂಡು ಇಬ್ಬರು ವೀರರು ಪ್ರಾಣ ಬಿಟ್ಟ ಬಗ್ಗೆ ಉಲ್ಲೇಖವಿದೆ. ಇ. ಸ. ೧೨೨೦ರಲ್ಲಿ ಹೊಯ್ಸಳರ ಅರಸನಾದ ವೀರಬಲ್ಲಾಳನು ತೀರಿಕೊಂಡಾಗ ಲಕ್ಷ್ಮಣನೆಂಬ ರಾಜಪುತ್ರನು ಸಾವಿರ ವೀರರೊಡನೆ ಅರಸನ ಮರಣಕ್ಕಾಗಿ ಪ್ರಾಣ ಬಿಟ್ಟನು. ಇವರೆಲ್ಲ ಅರಸನ ಅಂಗರಕ್ಷಕರಿದ್ದು ಅವನೊಡನೆಯೇ ಸಾಯಲು ನಿಶ್ಚಯಿಸಿದ್ದರು. ಇವರಿಗೆ ಗರುಡರೆಂಬ ಹೆಸರಿತ್ತು. ಇವರ ಸ್ವಾರ್ಥತ್ಯಾಗವನ್ನು ಕೊಂಡಾಡುವ ಬಗ್ಗೆ ಹಳೇಬೀಡಿನ ದೇವಾಲಯದ ಬದಿಯಲ್ಲಿ ಒಂದು ಸ್ಮಾರಕಸ್ತಂಭವು ಇನ್ನೂ ಇರುವದು.

**ನಡಾವಳಿಗಳು.**



# ಮಧ್ಯಕಾಲದ ಕರ್ನಾಟಕ.

## ೯ನೇ ಪ್ರಕರಣ.

## ವಿಜಯನಗರದ ಸಾಮ್ರಾಜ್ಯವು.

(೧೪ರಿಂದ ೧೬ನೆಯ ಶತಮಾನದ ವರೆಗೆ.)

ಇ. ಸ. ೯೭೩ರಲ್ಲಿ ತೈಲಪನಿಂದ ಸ್ಥಾಪಿತವಾದ ಚಾಲುಕ್ಯರ ಸಾಮ್ರಾಜ್ಯವು ವಿಕ್ರಮಾದಿತ್ಯನ ಆಳಿಕೆಯಲ್ಲಿ ಒಳ್ಳೇ ಘನತೆಗೇರಿ, ಸುಮಾರು ೨೦೦ ವರ್ಷಗಳ ವರೆಗೆ ಜಾಳಿ, ಮುಂದೆ ದುರ್ಬಲರಾದ ಅರಸರ ಕೈಗೆ ಬಿದ್ದು ಮುಗ್ಗಿ ಹೊಸ ಭೂಪಾಲರ ಪಾಲಾಯಿತು. ಇಷ್ಟರಲ್ಲಿ ಉತ್ತರಹಿಂದುಸ್ತಾನದಲ್ಲಿ

೧೩೦೦.

ಸಾಮ್ರಾಜ್ಯವನ್ನು ಸ್ಥಾಪಿಸಿದ್ದ ಮುಸಲ್ಮಾನರ ಕಣ್ಣು ದಕ್ಷಿಣ ಹಿಂದುಸ್ತಾನದ ಮೇಲೆ ಬಿತ್ತು. ಆಗ ದಕ್ಷಿಣದಲ್ಲಿ ಸಣ್ಣ ಸಣ್ಣ ಸ್ವತಂತ್ರರಾಜ್ಯಗಳು ಮಾತ್ರ ಇದ್ದವು. ಅಲ್ಲಾಉದ್ದೀನ ಬಾದಶಹನು ತನ್ನ ದಳಪತಿಯಾದ ಮಲಿಕ ಕಾಫೂರನನ್ನು ದಂಡುಕೊಟ್ಟು ಕಳಿಸಲು, ಅವನು ತಡೆಯಿಲ್ಲದೆ ಸಾಗಿ ಕನ್ನಡ ರಾಜ್ಯಗಳ ರಾಜಧಾನಿಗಳಾಗಿದ್ದ ದೇವಗಿರಿ, ವರಂಗೂಳ, ಹಳೇಬೀಡು ಎಂಬ ಪಟ್ಟಣಗಳನ್ನು ಸುಲಿದು ಹೋದನು. ಮುಸಲ್ಮಾನರು ಮಾಡಿದ ಕೊಳ್ಳೆಯನ್ನು ನೋಡಿ ಮುಖ್ಯ ಹಿಂದೂರಾಜವಂಶಗಳ ವೀರರು ಚಟಪಟಿಸಹತ್ತಿದರು. ಸಾವಿರಾರು ವರ್ಷಗಳಿಂದ ಆಳಿದ ಕನ್ನಡ ಅರಸರ ಬಲದಿಂದ ಬೆಳೆದು ಹೊಸ ರೂಪವನ್ನು ಧರಿಸಿದ ಹಿಂದೂ ಧರ್ಮವು ಲೋಕಪ್ರಿಯವಾಗಿತ್ತು. ಚಾಲುಕ್ಯರ ಕಾಲದಿಂದ ರಾಜ್ಯವ್ಯವಸ್ಥೆಯೂ ವ್ಯಾಪಾರೋದ್ಯೋಗಗಳೂ ವಿದ್ಯೆಕಲೆಗಳೂ ಊರ್ಜಿತಸ್ಥಿತಿಯಲ್ಲಿದ್ದವು. ಪರಧರ್ಮದ್ವೇಷಿಗಳಾದ ಮುಸಲ್ಮಾನರ ಸೇನೆಯ ಪ್ರವಾಹದಲ್ಲಿ ಇವೆಲ್ಲ ಮುಳುಗಿಹೋಗುವಂತೆ ತೋರಿದವು. ಇಷ್ಟರಲ್ಲಿ ಒಬ್ಬ ವಿಚಾರಶಾಲಿಯು, ತಲೆಯೆತ್ತುತ್ತಿದ್ದ ಒಂದು ಹಿಂದೂರಾಜ್ಯದ ರಾಜಧಾನಿಯನ್ನು ತುಂಗಭದ್ರೆಯ ದಕ್ಷಿಣದಂಡೆಯ ಮೇಲೆ ಸ್ಥಾಪಿಸಿ, ಮುಸಲ್ಮಾನರನ್ನು ತಡೆದನು. ವಿದ್ಯಾರಣ್ಯಮುನಿಯೇ ಈ ಮಹಾಪುರುಷನು. ವಿಜಯನಗರವೇ ಈತನು ಸ್ಥಾಪಿಸಿದ ಕನ್ನಡ ರಾಜ್ಯದ ರಾಜಧಾನಿಯು.

೧೨೯೪ರಲ್ಲಿ ಅಲ್ಲಾಉದ್ದೀನನು ಮುಸಲ್ಮಾನ ದಂಡಿನೊಡನೆ ದಕ್ಷಿಣ ಹಿಂದುಸ್ತಾನದಲ್ಲಿ ಮೊದಲು ಕಾಲಿಟ್ಟಾಗ ದೇವಗಿರಿಯಲ್ಲಿ ಯಾದವರೂ, ವರಂಗೂಳದಲ್ಲಿ ಕಾಕತೀಯರೂ, ದ್ವಾರಸಮುದ್ರದಲ್ಲಿ ಹೊಯ್ಸಾಲರೂ ಆಳುತ್ತಿದ್ದರು. ಮೊದಲು ಅಲ್ಲಾಉದ್ದೀನನಿಗೆ ಜಯದೊರೆಯಲಿಲ್ಲ. ಇ. ಸ. ೧೩೧೦ರಲ್ಲಿ ದಂಡೆತ್ತಿ ಬಂದ ಮಲಿಕ ಕಾಫೂರನು ದೇವಗಿರಿ, ವರಂಗೂಳಗಳನ್ನು ಸುಲಿದು, ಹಳೇಬೀಡಿಗೆ ಹೋಗಿ ಅಲ್ಲಿರುವ ಭವ್ಯವಾದ ಗುಡಿಗಳನ್ನು ಕೆಡಿಸಿ, ಪಟ್ಟಣವನ್ನು ಸುಟ್ಟು ಮುಸಲ್ಮಾನರ ಭಯಂಕರವಾದ ಯುದ್ಧಪ್ರಕಾರವನ್ನು ತೋರಿಸಿ ಬಂದನು. ಇ. ಸ. ೧೩೧೮ರಲ್ಲಿ ದೇವಗಿರಿಯು ಮುಸಲ್ಮಾನರ ವಶವಾಯಿತು. ಇ. ಸ. ೧೩೨೩ರಲ್ಲಿ ವರಂಗೂಳವೂ ದಿಲ್ಲಿಯ ರಾಜ್ಯಕ್ಕೆ ಸೇರಿಸಲ್ಪಟ್ಟಿತು.

**ಮುಸಲ್ಮಾನರ ಜಯಗಳು.**


ಅಲ್ಲಾಉದ್ದೀನ ಖಿಲಜಿ.

ಇ. ಸ. ೧೩೨೫ರಲ್ಲಿ ಮುಹಮ್ಮದ ತಘಲಕನು ದಿಲ್ಲಿಯ ಸಿಂಹಾಸನವೇರಿದನು. ಇವನ ತಮ್ಮನ ಮಗನಾದ ಬಾಹಉದ್ದೀನನು ಆಗ ಮುಸಲ್ಮಾನರ ದಕ್ಷಿಣದ ಪ್ರಾಂತಗಳ ಸುಭೇದಾರನಾಗಿ ದೇವಗಿರಿಯಲ್ಲಿದ್ದನು. ಕಕ್ಕನ ಹುಚ್ಚುಕೆಲಸಗಳಿಂದ ಸಾಮ್ರಾಜ್ಯದಲ್ಲೆಲ್ಲ ದಂಗೆಗಳೆದ್ದಿದ್ದವು. ಈ ಸಂಧಿ ಸಾಧಿಸಿ ಬಾಹಉದ್ದೀನನು ದಕ್ಷಿಣದಲ್ಲಿ ಸ್ವತಂತ್ರನಾಗಲು ಹವಣಿಸಿ, ಯುದ್ಧದಲ್ಲಿ ಸೋತು ಆನೆಗುಂದಿಯ ಅರಸರ ಮರೆಹೊಕ್ಕನು. ಇವನನ್ನು ಮುರಿಬಡಿಯುವದಕ್ಕಾಗಿ ಸುಲ್ತಾನನು ಸ್ವಂತವಾಗಿ ಬರುವದರೊಳಗೆ ಇವನು ಹೊಯ್ಸಾಲರ ರಾಜಧಾನಿಯಾಗಿದ್ದ ತುಣ್ಣೂರಿಗೆ ಓಡಿಹೋಗಿದ್ದನು. ಮುಹಮ್ಮದನು ಅಲ್ಲಿ ಇವನನ್ನು ಹಿಡಿದು ಚರ್ಮ ಸುಲಿಸಿ ಕ್ರೂರತನದಿಂದ ಕೊಲ್ಲಿಸಿದನು.

**ಬಾಹ ಉದ್ದೀನ.**

ಇಷ್ಟರಲ್ಲಿ ಮುಸಲ್ಮಾನರ ಕಾಡುಕಲಿತನದಿಂದ ಹಿಂದೂಧರ್ಮಕ್ಕೂ ಕನ್ನಡ ರಾಜ್ಯಗಳಿಗೂ ಅಳಿಗಾಲವು ಬಂದದ್ದನ್ನು ನೋಡಿ ಶ್ರಿಂಗೇರಿಯಲ್ಲಿ ಶಂಕರಾ

 

ಚಾರ್ಯರ ಸ್ಥಾನಾಪನ್ನನಾಗಿದ್ದ ವಿದ್ಯಾರಣ್ಯ (ಮಾಧವಾಚಾರ್ಯ)ನೆಂಬ ಘನವಿದ್ವಾಂಸನು ತುಂಗಭದ್ರೆಯ ದಕ್ಷಿಣದಂಡೆಯ ಮೇಲೆ ಆನೆಗುಂದಿಯ

**ವಿಜಯ ನಗರದ ಸ್ಥಾಪನೆ.**

ಎದುರಿಗೆ ವಿದ್ಯಾನಗರವೆಂಬ ಪಟ್ಟಣದಲ್ಲಿ ಒಂದು ಹಿಂದೂರಾಜ್ಯವನ್ನು ಸ್ಥಾಪಿಸಿದನು. **ಹುಕ್ಕ ಬುಕ್ಕ** ಎಂಬ ಇಬ್ಬರು ವೀರರು ವರಂಗೂಳದಿಂದ ಬಂದು ಆನೆಗುಂದಿಯಲ್ಲಿದ್ದರು. ಇವರಲ್ಲಿ ಅಣ್ಣನಾದ ಹುಕ್ಕನಿಗೆ ವಿದ್ಯಾರಣ್ಯನು **ಹರಿಹರ**ನೆಂದು ಹೆಸರಿಟ್ಟು ಇ. ಸ. ೧೩೩೫ರಲ್ಲಿ ಪಟ್ಟಕಟ್ಟಿ ಅವನ ಮಂತ್ರಿಯಾದನು. ಹುಕ್ಕನ ನಾಲ್ವರು ತಮ್ಮಂದಿರಲ್ಲಿ ಎರಡನೆಯವನಾದ ಬುಕ್ಕನು ಶೂರನಿದ್ದನು. ಹರಿಹರನು ಇವನನ್ನು ಯುವರಾಜನನ್ನಾಗಿ ಮಾಡಿ, ದಕ್ಷಿಣದ ಸೀಮೆಗಳ ಒಡೆತನವನ್ನು ಪಡೆಯಲಿಕ್ಕೆ ಕಳಿಸಿದನು. ಹರಿಹರನ ಮಿಕ್ಕ ತಮ್ಮಂದಿರು ಮಂಡಲಾಧೀಶರಾದರು. ವಿದ್ಯಾರಣ್ಯನ ಗುರುಶಕ್ತಿಯ ಬಲದಿಂದ ತುಸು ವರ್ಷಗಳಲ್ಲಿಯೇ ವಿಜಯನಗರವು ಸಾಮ್ರಾಜ್ಯವೆನಿಸಹತ್ತಿತು. ವರಂಗೂಳದ ರಾಜಪುತ್ರನಾದ ಕೃಷ್ಣನಾಯಕನು ವಿಜಯನಗರಕ್ಕೆ ಬಂದು ಹರಿಹರರಾಯನ ಸಹಾಯದಿಂದ ಇ. ಸ. ೧೩೪೪ರಲ್ಲಿ ವರಂಗೂಳವನ್ನು ಮುತ್ತಿ, ಮುಸಲ್ಮಾನರನ್ನು ಅಲ್ಲಿಂದ ಓಡಿಸಿಬಿಟ್ಟನು.

**ಹರಿಹರರಾಯನ ರಾಜ್ಯವ್ಯವಸ್ಥೆ.**

ಮುಂದೆ ಹರಿಹರರಾಯನು **ಮಾಧವ ಮಂತ್ರಿ**ಯ ಸಹಾಯದಿಂದ ರಾಜ್ಯದಲ್ಲಿ ವ್ಯವಸ್ಥೆಯನ್ನುಂಟುಮಾಡಿದನು. ತನ್ನ ರಾಜ್ಯದಲ್ಲಿ ರಾಯರೆಂಬ ಸುಭೇದಾರರನ್ನು ನೇಮಿಸಿ ಅವರ ಕೈಕೆಳಗೆ ಪಾಳ್ಯಗಾರರನ್ನು ಕೊಟ್ಟನು. ಇವರು ತಮ್ಮ ಯೋಗ್ಯತೆಯ ಪ್ರಕಾರ ದಂಡು ಇಟ್ಟುಕೊಂಡು ಜಹಗೀರುಗಳನ್ನು ಅನುಭೋಗಿಸಿ ಸರಕಾರದ ಕಂದಾಯವನ್ನು ಎತ್ತುವರು. ಭೂಮಿಯ ಹುಟ್ಟುವಳಿಯಲ್ಲಿ ೩೦ ಪಾಲು ಮಾಡಿ, ೫ ಸರಕಾರಕ್ಕೆ, ೭೨/೩ ಒಡೆಯನಿಗೆ, ೧೫ ರೈತರಿಗೆ, ೧೨/೩ ಬ್ರಾಹ್ಮಣರಿಗೆ, ೧ ದೇವರಿಗೆ ಈ ಪ್ರಕಾರ ಭಾಗಗಳನ್ನು ಹಂಚಿಕೊಡುತ್ತಿದ್ದರು. ಹರಿಹರರಾಯನು ವಿಜಯನಗರದಲ್ಲಿರುವ ಹೆಸರಾದ **ವಿರೂಪಾಕ್ಷ** ದೇವರ ಗುಡಿಯನ್ನು ತನ್ನ ಗುರುವಾದ ವಿದ್ಯಾರಣ್ಯನ ನೆನಪಿಗೆಂದು ಕೃತಜ್ಞತೆಯಿಂದ ಕಟ್ಟಿಸಿದನು.

ಇತ್ತ ಹುಚ್ಚ ಮಹಮ್ಮದನ ಆಳಿಕೆಗೆ ಎಲ್ಲರೂ ಬೇಸತ್ತಿದ್ದರು. ಇ. ಸ. ೧೩೪೭ರಲ್ಲಿ ದೇವಗಿರಿಯಲ್ಲಿದ್ದ ಮುಸಲ್ಮಾನ ಸರದಾರರೆಲ್ಲ ಬಂಡಾಯವೆಬ್ಬಿಸಿದರು. ಇದನ್ನು ಮುರಿಯಲಿಕ್ಕೆ ಮಹಮ್ಮದನು ಕಳಿಸಿದ ದಂಡನ್ನು ಸೋಲಿಸಿ, **ಜಾಫರಖಾನ**ನೆಂಬ ಸರದಾರನು **ಕಲಬುರ್ಗಿ**ಯಲ್ಲಿ ಒಂದು ಸ್ವತಂತ್ರರಾಜ್ಯ

ವನ್ನು ಸ್ಥಾಪಿಸಿದನು. ಇವನು ಮೊದಲು ದಿಲ್ಲಿಯೊಳಗೆ **ಗಂಗೂ** ಎಂಬ ಬ್ರಾಹ್ಮಣನ ಆಳಾಗಿದ್ದನು. ಇವನ ಪ್ರಾಮಾಣಿಕತನಕ್ಕೆ ಮೆಚ್ಚಿ ಆ ಬ್ರಾಹ್ಮಣನು ಇವನಿಗೆ ಬಾದಶಹನ ದಂಡಿನಲ್ಲಿ ಒಂದು ಕೆಲಸ ಕೊಡಿಸಿದನು. ಅಲ್ಲಿ ಜಾಫರನು ಪರಾಕ್ರಮದಿಂದ ಘನತೆಗೇರಿ ಬಾದಶಹನ ದಕ್ಷಿಣದ ದಂಡಿನ ಮುಖ್ಯಾಧಿಕಾರವನ್ನು ದೊರಕಿಸಿದ್ದನು. ಅರಸಾದ ಬಳಿಕ ಇವನು ತನ್ನ ಹಿಂದಿನ ಒಡೆಯನ ಉಪಕಾರವನ್ನು ನೆನೆದು **ಅಲ್ಲಾಉದ್ದೀನ ಹುಸೇನ ಗಂಗೂ ಬಾಮನೀ** ಎಂಬ ಪದವಿಯನ್ನು ಧರಿಸಿದನು. ಇವನ ರಾಜವಂಶವು **ಬಾಮನೀವಂಶ**ವೆಂದು

**ಬಾಮನೀ ರಾಜ್ಯ ಸ್ಥಾಪನೆ.**




ಬಾಮನೀ ಮತ್ತು ವಿಜಯನಗರ ರಾಜ್ಯಗಳ ವಿಸ್ತಾರ.

ಹೆಸರಾಯಿತು. ಅಲ್ಲಾಉದ್ದೀನನು ಶೂರನೂ ಚತುರನೂ ಜನರನ್ನು ಒಲಿಸಿಕೊಳ್ಳುವವನೂ ಇದ್ದದರಿಂದ ತುಸು ವರ್ಷಗಳಲ್ಲಿಯೇ ತಾಪೀ ಕೃಷ್ಣಾ

ಹೊಳೆಗಳ ನಡುವಿನ ಸೀಮೆಯು ಇವನ ರಾಜ್ಯಕ್ಕೆ ಸೇರಿತು. ಈ ಮೇರೆಗೆ ೧೪ನೆಯ ಶತಮಾನದ ಮಧ್ಯದಲ್ಲಿ ದಕ್ಷಿಣಹಿಂದುಸ್ತಾನದಲ್ಲಿ ವಿರುದ್ಧ ಧರ್ಮದ ಎರಡು ರಾಜ್ಯಗಳು ಪ್ರಬಲವಾಗುತ್ತಿದ್ದವು. ವರಂಗೂಳದಲ್ಲಿ ಕೃಷ್ಣನಾಯಕನು ರಾಜ್ಯವಾಳುತ್ತಿದ್ದನು. ಅಲ್ಲಾಉದ್ದೀನನು ಇವೆರಡೂ ರಾಜ್ಯಗಳ ಕೂಡ ಹೋರಾಡಿ ಒಂದೆರಡು ಸೀಮೆಗಳನ್ನು ಹಿಡಕೊಂಡಂತೆ ತೋರುತ್ತದೆ. ಕೃಷ್ಣ ನಾಯಕನು ಇವನಿಗೆ ಕಪ್ಪಕೊಡುತ್ತಿದ್ದನು.

ಹರಿಹರರಾಯನು ಇ. ಸ. ೧೩೫೪ರಲ್ಲಿ ಸಂತಾನವಿಲ್ಲದೆ ಮರಣಹೊಂದಲು ಬುಕ್ಕರಾಯನು ಪಟ್ಟಕ್ಕೆ ಬಂದನು. ಅಣ್ಣನ ಆಳಿಕೆಯಲ್ಲಿ ಇವನು ಯುವರಾಜ ನಿದ್ದು ಪರಾಕ್ರಮದಿಂದ ಯುದ್ಧಗಳನ್ನಾಡಿ ರಾಜ್ಯ ಬೆಳಿಸಲಿಕ್ಕೆ ಬಹಳ ನೆರ ವಾಗಿದ್ದನು. ಅರಸಾದ ಕೂಡಲೆ, ಬುಕ್ಕನು ರಾಜ್ಯವನ್ನು ಮತ್ತೆ ವಿಸ್ತಾರ

**ಬುಕ್ಕರಾಯ.**

ಪಡಿಸಿ, ರಾಜಧಾನಿಯ ಸುತ್ತಲು ಕೋಟೆಗಳನ್ನು ಕಟ್ಟಿಸಿ ಅದನ್ನು ಭದ್ರಪಡಿಸಿ, ದ್ರವ್ಯವನ್ನು ಕೂಡ ಹಾಕಿ, ವಿದ್ವಾಂಸ ರಿಗೆ ಆಶ್ರಯ ಕೊಟ್ಟು, ಗುಡಿಗೋಪುರಗಳನ್ನು ಕಟ್ಟಿಸಿ, ಧರ್ಮವನ್ನು ಬೆಳಿಸಿ, ಕೆರೆಕಾಲುವೆಗಳನ್ನು ಕಡಿಸಿ, ಒಕ್ಕಲತನ ವ್ಯಾಪಾರಗಳಿಗೆ ನೆರವಾಗಿ, ಪ್ರಜರನ್ನೆಲ್ಲ ಸುಖದಿಂದಿಟ್ಟು ಎಲ್ಲರ ಪ್ರೀತಿಗೊಳಗಾದನು. ಮುದ್ದಪ್ಪನೆಂಬವನು ಇವನ ಸೇನಾಪತಿಯೂ ಮಾಧವನು ಮಂತ್ರಿಯೂ ವಿದ್ಯಾರಣ್ಯನು ಗುರುವೂ ಆಗಿ ದ್ದರು. ವಿಜಯನಗರವು ಐಶ್ವರ್ಯವಿದ್ಯೆಗಳ ಬಗ್ಗೆ ಹೆಸರಾಯಿತು. ಬುಕ್ಕನು ಚೋಳ ಚೇರ ಮುಂತಾದ ರಾಜ್ಯಗಳನ್ನು ಜಯಿಸಿ ವಿಜಯನಗರದ ಸಾಮ್ರಾಜ್ಯ ವನ್ನು ಪೂರ್ವ ಪಶ್ಚಿಮ ದಕ್ಷಿಣ ದಿಕ್ಕುಗಳಲ್ಲಿ ಸಮುದ್ರದ ವರೆಗೆ ಬೆಳಿಸಿದನು.

ಹೀಗಿರಲು ಇ. ಸ. ೧೩೫೭ರಲ್ಲಿ ಕಲಬುರ್ಗೆಯ ಸಿಂಹಾಸನವನ್ನೇರಿದ ಮಹಮ್ಮದಶಹನು ಕ್ರೂರನೂ ಸಂತಾಪಿಯೂ ಇದ್ದನು. ವಿಜಯನಗರದ ಏಳಿಗೆಯನ್ನು ನೋಡಿ ಇವನು ಮನದೊಳಗೆ ಹಲ್ಲುಕಟೆಯುತ್ತಿದ್ದನು. ಇ. ಸ. ೧೩೬೦ರಲ್ಲಿ ಇವನು ವರಂಗೂಳವನ್ನು ಗೆದ್ದುಕೊಂಡು ಅಲ್ಲಿಯ ಅರಸನನ್ನು ಕ್ರೂರತನದಿಂದ ಕೊಲ್ಲಿಸಿದನು; ಮುಂದೆ ೫-೬ ತಿಂಗಳು ಸಿದ್ಧತೆ ಮಾಡಿ ಬುಕ್ಕ ರಾಯನ ಕೂಡ ಯುದ್ಧ ಹೂಡಿದನು. ಕಲಹಕ್ಕೆ ಕಾರಣವು ಬೇಕಾಯಿತು. ಒಂದು ದಿನ ಮಹಮ್ಮದಶಹನು ಸಾರಾಯಿ ಕುಡಿದು ಕುಳಿತಿದ್ದಾಗ ಕೆಲವು ಗಾಯಕರ ಸಂಗೀತಕ್ಕೆ ಸಂತೋಷಪಟ್ಟು ಅವರಿಗೆ ಇನಾಮು ಕೊಡುವ ಬಗ್ಗೆ ವಿಜಯನಗರದ ಬೊಕ್ಕಸದ ಮೇಲೆ ಹುಂಡಿಯನ್ನು ಬರೆಯಿಸಿದನು. ಈ ಹೆಂಡದ

ಹುಂಡಿಯನ್ನು ತಂದವನನ್ನು ಬುಕ್ಕರಾಜನು ಕತ್ತೆಯ ಮೇಲೆ ಕುಳ್ಳಿರಿಸಿ ಊರ ತುಂಬ ಮೆರೆಯಿಸಿ ಹಿಂದಕ್ಕೆ ಕಳಿಸಿ, ದೊಡ್ಡ ಸೈನ್ಯದೊಡನೆ ಹೊರಟು ಸುಲ್ತಾನನ ಸೀಮೆಯನ್ನು ಹೊಕ್ಕು ಮುದಗಲ್ಲು ದುರ್ಗವನ್ನು ಹಿಡಕೊಂಡು ಅಲ್ಲಿದ್ದ ಜನರನ್ನು ಕೊಂದನು. ಇದನ್ನು ಕೇಳಿ ಕೆಂಡದಂತಾಗಿ ಮಹಮ್ಮದನು ಒಂದು ಲಕ್ಷ ಹಿಂದೂಜನರನ್ನು ಕೊಲ್ಲದೆ ಹಿಂದಿರುಗುವದಿಲ್ಲೆಂದು ಆಣೆಯಿಟ್ಟುಕೊಂಡನಂತೆ. **ಆದವಾನಿಯ** ಬಳಿಯಲ್ಲಿ ದೊಡ್ಡ ಯುದ್ಧವಾಯಿತು. ಎರಡೂ ಕಡೆಗೆ ಬಹು ಜನರು ಸತ್ತರು. ಮಹಮ್ಮದನಿಗೇ ಜಯವಾಯಿತೆಂದು ಮುಸಲ್ಮಾನ ಇತಿಹಾಸಕಾರರು ಹೇಳುತ್ತಾರೆ. ಮುಂದೆ ಬಹಳ ವರ್ಷಗಳ ವರೆಗೆ ಎರಡೂ ರಾಜ್ಯಗಳ ಮೇರೆಯಲ್ಲಿದ್ದ ಸೀಮೆಯ ಬಗ್ಗೆ ಯುದ್ಧಗಳು ನಡೆದೇ ಇದ್ದವು. ಇ. ಸ. ೧೩೭೫ರಲ್ಲಿ ಮಹಮ್ಮದನು ತೀರಿದನು.

**ಹೆಂಡದ ಹುಂಡಿ.**

ಮುಂದೆ ಎರಡು ವರ್ಷಗಳಲ್ಲಿ ಬುಕ್ಕ ಮಹಾರಾಯನೂ ತೀರಿದನು. ಇವನ ಮಗನಾದ **೨ನೇ ಹರಿಹರನು** ವಿದ್ವಾಂಸರಿಗೆ ಆಶ್ರಯ ಕೊಡುವದರಲ್ಲಿಯೂ ಧಾನಧರ್ಮ ಮಾಡುವದರಲ್ಲಿಯೂ ಹೆಸರಾಗಿದ್ದನು. ತನ್ನ ತಂದೆಯಿಂದ ಬಂದ ಅರಸೊತ್ತಿಗೆಯನ್ನು ಇವನು ಅಭಿಮಾನದಿಂದ ಕಾಯ್ದು, **ಗುಂಡ** ಸೇನಾಪತಿಯ ಸಹಾಯದಿಂದ ರಾಜ್ಯವನ್ನು ವಿಸ್ತಾರ ಪಡಿಸಿ ೨೫ ವರ್ಷ ಶಾಂತತೆಯಿಂದ ಸಾಮ್ರಾಜ್ಯ ವಾಳಿದನು. ಇವನ ಆಳಿಕೆಯಲ್ಲಿಯೂ ವಿದ್ಯಾರಣ್ಯಗುರುವು ಇದ್ದನು. ಈತನ ತಮ್ಮನಾದ **ಸಾಯನಾಚಾರ್ಯನು** ಇವನ ಮಂತ್ರಿಯಾಗಿದ್ದನು. ಈಗ ವಿಜಯನಗರವು ಬಹು ಘನತೆಗೇರಿತು. ಪ್ರಜರು ಬಹಳ ಸುಖದಿಂದಿದ್ದರು. ವಿಜಯನಗರದ ಅರಸರಲ್ಲಿ **ಮಹಾರಾಜಾಧಿರಾಜ, ರಾಜಪರಮೇಶ್ವರ** ಎಂಬ ಬಿರುದುಗಳನ್ನು ಇವನೇ ಮೊದಲು ಧರಿಸಿದನು. ಇವನು ಇ. ಸ. ೧೪೦೪ರ ವರೆಗೆ ಆಳಿದನು.

**೨ನೇ ಹರಿಹರನು.**

೨ನೇ ಹರಿಹರರಾಯನ ಆಳಿಕೆಯ ಕೊನೆಯ ಭಾಗದಲ್ಲಿ ಫಿರೋಜಶಹನೆಂಬವನು ಕಲಬುರ್ಗಿಯಲ್ಲಿ ಪಟ್ಟಕ್ಕೆ ಕುಳಿತನು. ಇವನಿಗೆ “ದಕ್ಷಿಣದ ಸವಿಯರಸ” ಎಂಬ ಹೆಸರಿತ್ತು. ಇವನು ಸಂಗೀತಪ್ರಿಯನೂ ಬಲು ಕುಡಕನೂ ಇದ್ದನು. ಆದರೂ ರಾಜಕಾರ್ಯಗಳನ್ನು ದುರ್ಲಕ್ಷಿಸುತ್ತಿರಲಿಲ್ಲ. ಹಗಲೆಲ್ಲ ದುಡಿದು ಸಂಜೆಗೆ ದುಂದುಗಾರಿಕೆಯಲ್ಲಿ ಮುಳುಗುತ್ತಿದ್ದನು. ಭೀಮಾನದಿಯ

ಮೇಲೆ ಇವನು ಒಂದು ಪಟ್ಟಣ ಕಟ್ಟಿಸಿ ಫಿರೋಜಾಬಾದ ಎಂದು ಅದಕ್ಕೆ ಹೆಸರಿಟ್ಟನು. ಇ. ಸ. ೧೩೯೮ರಲ್ಲಿ ೨ನೇ ಹರಿಹರನು ಇವನ ವಶದಲ್ಲಿದ್ದ ಮುದಗಲ್ಲು ರಾಯಚೂರಗಳನ್ನು ವಶಮಾಡಿಕೊಳ್ಳಬೇಕೆಂದು ಹೋಗಿ ಕೃಷ್ಣೆಯ ದಂಡೆಯ ಮೇಲೆ ಪಾಳ್ಯ ಹೂಡಿದನು.

**ಫಿರೋಜನಿಗೂ ಹರಿಹರನಿಗೂ ಯುದ್ಧ.**

ಫಿರೋಜನು ಮೋಸದಿಂದ ರಾತ್ರಿಯಲ್ಲಿ ಹರಿಹರರಾಯನ ಮಗನನ್ನು ಕೊಲ್ಲಿಸಲು ಪಾಳ್ಯದಲ್ಲಿ ಗದ್ದಲವೆದ್ದಿತು. ಹರಿಹರರಾಯನು ಓಡಿಹೋದನು. ಸುಲ್ತಾನನು ವಿಜಯನಗರದ ವರೆಗೆ ಹೋಗಿ ಕೋಟೆಯನ್ನು ವಶಮಾಡಿಕೊಳ್ಳಲಿಕ್ಕಾಗದೆ ಒಪ್ಪಂದ ಮಾಡಿಕೊಂಡು ತಿರುಗಿ ಬಂದನು.

೨ನೇ ಹರಿಹರರಾಯನು ಇ. ಸ. ೧೪೦೪ರಲ್ಲಿ ಮರಣ ಹೊಂದಿದ ಬಳಿಕ ಇವನ ಮಗನಾದ ದೇವರಾಯನು ಪಟ್ಟವೇರಿ ೧೮ ವರ್ಷ ಆಳಿದನು. ಇವನ

**ದೇವರಾಯ.**

ಆಳಿಕೆಯಲ್ಲಿಯೂ ಫಿರೋಜನ ಕೂಡ ಯುದ್ಧಗಳು ನಡೆದೇ ಇದ್ದವು. ದೇವರಾಯನು ಶೌರ್ಯನೀತಿಗಳಲ್ಲಿ ಹೆಸರಾಗಿದ್ದನು. ಇವನು ತುಂಗಭದ್ರೆಗೆ ಒಂದು ಒಡ್ಡು ಹಾಕಿಸಿ ಕಾಲುವೆಗಳಿಂದ ಬಹಳ ಪ್ರದೇಶಕ್ಕೆ ನೀರು ಹಾಯಿಸಿದನು; ನದಿಯಿಂದ ಕಾಲುವೆ ತಂದು ರಾಜಧಾನಿಗೆ ನೀರಿನ ಪುರವಠೆ ಮಾಡಿದ್ದಲ್ಲದೆ ಉದ್ಯಾನೋಪವನಗಳನ್ನು ಬೆಳಿಸಿದನು; ಭವ್ಯವಾದ ಮಂದಿರಗಳನ್ನು ಕಟ್ಟಿಸಿ ಪಟ್ಟಣದ ಸೌಂದರ್ಯವನ್ನು ಹೆಚ್ಚಿಸಿದನು; ವಿಜಯನಗರಕ್ಕೆ ಹೊಸ ಕೋಟೆಗಳನ್ನು ಕಟ್ಟಿಸಿ ಭದ್ರ ಪಡಿಸಿದನು. ಈತನ ಕಾಲದಲ್ಲಿ ಸಾಮ್ರಾಜ್ಯವು ದಕ್ಷಿಣದಲ್ಲೆಲ್ಲ ಹಬ್ಬಿತ್ತು. ದೇವರಾಯನ ಮಂತ್ರಿಯಾದ ಲಕ್ಷ್ಮಣದೇವನು ಶಾಸ್ತ್ರಗಳಲ್ಲಿ ಪಾರಂಗತನಾಗಿ ಪ್ರಜೆಗಳನ್ನು ಬಹು ಪ್ರೀತಿಯಿಂದ ಸಂರಕ್ಷಿಸಿದ ಕಾರಣ ಬಹು ಜನ ಕವಿಗಳು ಇವನನ್ನು ಕೊಂಡಾಡಿದ್ದಾರೆ. ಇ. ಸ. ೧೪೨೨ರಲ್ಲಿ ಇವನೂ ಫಿರೋಜಶಹನೂ ತೀರಿಕೊಂಡರು.

**೨ನೇ ದೇವರಾಯನ ಸೈನ್ಯದ ಸುಧಾರಣೆ.**

೨ನೇ ದೇವರಾಯನು ಇವನ ಮೊಮ್ಮಗನು; ಇ. ಸ. ೧೪೨೩ರಲ್ಲಿ ಪಟ್ಟವೇರಿದನು. ಮುಸಲ್ಮಾನ ಸೈನ್ಯವು ಚತುರರಾದ ಬಿಲ್ಲುಗಾರರಿಂದಲೂ ಮೇಲಾದ ಕುದುರೆಗಳಿಂದಲೂ ಜಯಹೊಂದುವದನ್ನು ಕಂಡು ಇವನು ಮುಸಲ್ಮಾನರನ್ನು ದಂಡಿನಲ್ಲಿ ಸೇರಿಸಿ, ಅವರಿಗೆ ಜಹಗೀರು ಹಾಕಿ ಕೊಟ್ಟು,

ಮಶೀದೆಗಳನ್ನು ಕಟ್ಟಿಸಿ, ಧರ್ಮದಲ್ಲಿ ಅವರನ್ನು ತಡವಬಾರದೆಂದು ಕಟ್ಟಳೆ ಮಾಡಿ, ಹಿಂದೂ ಸೈನಿಕರನ್ನು ಬಲಪಡಿಸಿದನು. **ಈಗ ೨ನೇ ಅಲ್ಲಾಉದ್ದೀನನು** ಕಲಬುರ್ಗೆಯ ಅರಸನಿದ್ದನು. ಇವರಿಬ್ಬರಿಗೆ ಮುದಗಲ್ಲಿನ ಹತ್ತರ ಮೂರು ಯುದ್ಧಗಳಾದವು. ಕಡೆಯ ಯುದ್ಧದಲ್ಲಿ ದೇವರಾಯನು ಸೋತು ಒಪ್ಪಂದಮಾಡಿಕೊಂಡನು.

ಬಳಿಕ ದೇವರಾಯನ ಇಬ್ಬರು ಮಕ್ಕಳು ಆಳಿದರು. ಇವರಲ್ಲಿ ೨ನೆಯವನಾದ ವಿರೂಪಾಕ್ಷರಾಯನು ೧೪೭೮ರ ವರೆಗೆ ಆಳಿದನು. ಇವನು ವಿಜಯನಗರದ ಮೊದಲನೆಯ ವಂಶದ ಕೊನೆಯ ಅರಸನು. ಆಗ ಕಲಬುರ್ಗೆಯಲ್ಲಿ

**೨ನೇ ಮುಹಮ್ಮದನ ರಾಜ್ಯವಿಸ್ತಾರ.**

**೨ನೇ ಮುಹಮ್ಮದನು** ಆಳುತ್ತಿದ್ದನು. ಈತನ ಆಳಿಕೆಯಲ್ಲಿ ಬಾಮನೀ ರಾಜ್ಯವು ಪರಮ ಘನತೆಗೆ ಏರಿತು. ಇವನ ಮಂತ್ರಿಯಾದ **ಖಾಜೀಜಹಾನನು** ಬಹು ಪರಾಕ್ರಮಿಯೂ ಚತುರನೂ ರಾಜನಿಷ್ಠನೂ ವಿದ್ಯಾಭಿಮಾನಿಯೂ ವಿರಕ್ತನೂ ಇದ್ದನು. ಇವನು ಪೂರ್ವದ ಕಡೆಗೆ ಬಹಳ ಸೀಮೆಯನ್ನೂ ಪಶ್ಚಿಮದಲ್ಲಿ **ಸಿಂಹಗಡದಿಂದ ಗೋವೆಯ** ವರೆಗೆ ಯಾವತ್ತು ಪ್ರಾಂತವನ್ನೂ ವಶಮಾಡಿಕೊಂಡನು. ಆಗ **ಬೆಳಗಾವಿಯ** ಸುಭೆಯು ವಿಜಯನಗರಕ್ಕೆ ಸೇರಿತ್ತು. ಖಾಜೀಜಹಾನನೂ ಸುಲ್ತಾನನೂ ಹೋಗಿ ಶೌರ್ಯದಿಂದ ಕಾದಿ ಅಲ್ಲಿಯ ಸುಭೇದಾರನಿಂದ ಅಲ್ಲಿಯ ಭದ್ರವಾದ ಕೋಟೆಯನ್ನು ತಕ್ಕೊಂಡರು (೧೪೭೨). ಮುಂದೆ ೨ ವರ್ಷ ದೊಡ್ಡ ಬರ ಬಿತ್ತು. ಈ ವಿಸ್ತಾರವಾದ ರಾಜ್ಯದಲ್ಲಿ ಖಾಜೀಜಹಾನನು ಹೊಸ ವ್ಯವಸ್ಥೆಯನ್ನೂ ಮೇಲಾದ ಕಟ್ಟಳೆಗಳನ್ನೂ ಸ್ಥಾಪಿಸಿದನು. ಆದರೆ ಮುಹಮ್ಮದನು ಮೋಸಗಾರರ ಚಾಡಿಗಳನ್ನು ನಂಬಿ, ನೆರೆದ ಸಭೆಯೊಳಗೆ ಈ ಮಂತ್ರಿಶ್ರೇಷ್ಠನ ತಲೆಹೊಡೆಸಿದನು (೧೪೮೧). ತರುವಾಯ ಬಾಮನೀ ರಾಜ್ಯವು ಕಳೆಗುಂದಿತು.

ಇತ್ತ ವಿಜಯನಗರದಲ್ಲಿ ವಿರೂಪಾಕ್ಷರಾಯನ ಆಳಿಕೆಯಲ್ಲಿ ಅವನ ಮಂತ್ರಿಯಾದ **ರಾಮರಾಯನು** ಎಲ್ಲ ಅಧಿಕಾರವನ್ನು ತಾನೇ ಆಕ್ರಮಿಸಿದನು.

**ಪೌಢರಾಯನು ವಿಜಯನಗರದಲ್ಲಿ ಅರಸಾದನು.**

ಇ. ಸ. ೧೪೭೮ರಲ್ಲಿ ವಿರೂಪಾಕ್ಷರಾಯನು ತೀರಲು, ಅವನ ಹಿರಿಮಗನಿಗೆ ವಿಷಹಾಕಿ ಕೊಂದು, ಎರಡನೇ ಮಗನನ್ನು ಹೆಸರಿಗೆ ಪಟ್ಟಕ್ಕೆ ಕುಳ್ಳಿರಿಸಿ, ರಾಮರಾಯನು ನಿಜವಾಗಿ ತಾನೇ ಆಳಹತ್ತಿದನು. ಈ ಹುಡುಗನು ಸಹ ವಿಜಾಪುರಕ್ಕೆ ಯುದ್ಧಕ್ಕೆ ಹೋಗಿ ಮರಣ ಹೊಂದಲಾಗಿ, ರಾಮ

ರಾಯನು ಪ್ರೌಢರಾಯನೆಂಬ ಬಿರುದಿನಿಂದ ತಾನೇ ಅರಸಾದನು (೧೪೮೬). ವಿದ್ಯಾರಣ್ಯನು ಮುಸಲ್ಮಾನರನ್ನು ತಡೆಯಲಿಕ್ಕಾಗಿ ಸ್ಥಾಪಿಸಿದ ರಾಜವಂಶವು ೧೫೦ ವರ್ಷ ವೈಭವದಿಂದ ಆಳಿ, ಕೈಕೊಂಡ ಕಾರ್ಯವನ್ನು ಕೈಗೂಡಿಸಿ, ಇಲ್ಲಿಗೆ ಮುಗ್ಗಿತು. ಮುಂದೆ ಬಲಿಷ್ಠರಾದವರೇ ಪಟ್ಟವನ್ನು ಹಿಡಕೊಂಡರು. ರಾಜ್ಯದೊಳಗೆ ಅವ್ಯವಸ್ಥೆ ಬಹಳವಾಯಿತು. ಇ. ಸ. ೧೪೯೬ರಲ್ಲಿ ಅರಸಾಗಿದ್ದ ಇಮ್ಮಡಿನರಸಿಂಹನನ್ನು ಕೊಲ್ಲಿಸಿ ಅವನ ದಳಪತಿಯಾದ ನರಸಿಂಗನು ಮತ್ತೆ ಹೊಸ ರಾಜವಂಶವನ್ನು ಸ್ಥಾಪಿಸಿದನು.

**ಬಾಮನೀ ರಾಜ್ಯದ ಹೋಳುಗಳು.**

ಈ ಸುಮಾರಿಗೆ ಬಾಮನೀ ರಾಜ್ಯದ ದರಬಾರದ ಸರದಾರರು ತಮ್ಮೊಳಗೆ ಬಡಿದಾಡಿ ಪ್ರಬಲರಾದ ಐವರು ೫ ಸ್ವತಂತ್ರರಾಜ್ಯಗಳನ್ನು ಸ್ಥಾಪಿಸಿದರು. ಇ. ಸ. ೧೪೮೪ರಲ್ಲಿ ವರ್‍ಹಾಡದಲ್ಲಿ




ಬಾಮನೀರಾಜ್ಯವು ಹಾಳಾಗಿ ಉಂಟಾದ ೫ ಸ್ವತಂತ್ರರಾಜ್ಯಗಳು.

ಅಮಾದಶಾಹಿಯು ಸ್ಥಾಪಿತವಾಯಿತು. ಇ. ಸ. ೧೪೮೯ರಲ್ಲಿ ವಿಜಾಪುರ ದಲ್ಲಿ ಆದಿಲಶಾಹಿಯು ಉಂಟಾಯಿತು. ಇ. ಸ. ೧೪೯೦ರಲ್ಲಿ ಅಹಮ್ಮದ ನಗರದಲ್ಲಿ ನಿಜಾಮಶಾಹಿಯು ಆರಂಭವಾಯಿತು. ಇ. ಸ. ೧೫೧೨ರಲ್ಲಿ ಗೋವಳಕೊಂಡದಲ್ಲಿ ಕುತುಬಶಾಹಿಯು ಸ್ಥಾಪಿಸಲ್ಪಟ್ಟಿತು. ಕಡೆಗೆ ಇ. ಸ. ೧೫೨೬ರಲ್ಲಿ ಬೇದರದಲ್ಲಿ ಬರೀದಶಾಹಿಯು ಉಂಟಾಯಿತು.

ಬಾಮನೀ ರಾಜ್ಯವು ಒಡೆದು ಆದ ರಾಜ್ಯಗಳಲ್ಲಿ ಆದಿಲಶಾಹಿಯೇ ಬಲ ವಾದದ್ದಿತ್ತು. ಇದನ್ನು ಸ್ಥಾಪಿಸಿದ ಯುಸುಫ ಆದಿಲಶಹನು ತುರ್ಕಸ್ತಾನದ ಸುಲ್ತಾನನ ೨ನೇ ಮಗನು; ತನ್ನ ಅಣ್ಣನಿಂದ ಮರಣ ತಪ್ಪಿಸಿ ಕೊಳ್ಳಲಿಕ್ಕೆ ಸ್ವದೇಶ ಬಿಟ್ಟು ಬಾಮನೀ ಸಂಸ್ಥಾನದಲ್ಲಿ ಬಂದು ನಿಂತು ದೊಡ್ಡಸ್ತಿಕೆಗೇರಿದನು. ಖಾಜೀಜಹಾನನ ಮರಣದ ನಂತರ ಇವನು ವಿಜಾಪುರದ ಸುಭೇದಾರನಾದನು. ಮುಂದೆ ಸಂಧಿ ಸಾಧಿಸಿ ಸ್ವತಂತ್ರನಾಗಿ ಬಾದಶಹನೆಂಬ ಪದವಿಯನ್ನು ಧರಿಸಿದನು; ಆಗ ಯಾವತ್ತು ಉತ್ತರ ಕರ್ನಾಟಕವು, ಪುಣೆಯ ವರೆಗೆ ಮಹಾರಾಷ್ಟ್ರ ದೇಶದ ಭಾಗವು, ದಾಭೋಳದಿಂದ ಮಂಗಳೂರ ವರೆಗೆ ಕೊಂಕಣದ ಭಾಗವು, ಇಷ್ಟು ರಾಜ್ಯವು ಇವನ ಅಧಿಕಾರಕ್ಕೆ ಸೇರಿತ್ತು. ಇವನು ವಿಜಾಪುರವನ್ನು ತನ್ನ ರಾಜಧಾನಿ ಮಾಡಿ, ಅದರ ಸುತ್ತಲು ಭದ್ರವಾದ ಕೋಟೆಯನ್ನು ಕಟ್ಟಿಸಿದನು. ಮುಂದೆ ತೀವ್ರವೇ ಆದಿಲಶಹನು ರಾಯಚೂರು, ಮುದಗಲ್ಲು ಎಂಬ ಕೋಟೆಗಳ ಸಲುವಾಗಿ ವಿಜಯನಗರದೊಡನೆ ಕಾಳಗ ಹೂಡಿ, ತಾನು ಸೋಲುವ ಹೊತ್ತು ಬಂದದ್ದು ನೋಡಿ ಕಪಟ ಮಾಡಿ, ರಾಮರಾಜನನ್ನೂ ಅವನ ಅಪ್ರಬುದ್ಧ ಒಡೆಯನನ್ನೂ ಒಡಂಬಡಿಕೆಯ ಸಲುವಾಗಿ ಎಂದು ಕರೆಸಿ, ಅಕಸ್ಮಾತ್ತಾಗಿ ಅವರ ಮೇಲೆ ಬಿದ್ದನು. ಈ ಗದ್ದಲದಲ್ಲಿ ವಿಜಯನಗರದ ಅರಸನು ಮಡಿದನು. ರಾಮರಾಯನು ಓಡಿಹೋಗಿ ಜೀವ ಉಳಿಸಿಕೊಂಡನು.

**ಯುಸುಫ ಆದಿಲಶಹ.**

ಇ. ಸ. ೧೪೯೮ರಲ್ಲಿ ಪೋರ್ತುಗಾಲ ದೇಶದ ಅರಸನು ಹಿಂದುಸ್ತಾನದ ಮಾರ್ಗವನ್ನು ಗೊತ್ತುಹಚ್ಚುವದಕ್ಕಾಗಿ ಕಳುಸಿದ ವಾಸ್ಕೋಡಿಗಾಮಾ ಎಂಬ ಸರದಾರನು ಕಾಲಿಕಟ್ಟ ಬಂದರಕ್ಕೆ ಬಂದಿಳಿದನು. ಇದೇ ನಮ್ಮ ದೇಶದಲ್ಲಿ ಯುರೋಪದವರು ಮೊದಲು ಬಂದದ್ದು. ಇವರು ಮೊದಲು ವ್ಯಾಪಾರಕ್ಕೆಂದು ಬಂದರು; ಆದರೆ ಹಿಂದುಸ್ತಾನದ ಸಂಪತ್ತಿಯನ್ನು ನೋಡಿ ಇವರಿಗೆ ರಾಜ್ಯದ

**ಪೋರ್ತುಗೀಜರ ಪ್ರವೇಶ.**

ಲೋಭ ಹುಟ್ಟಿತು. ಇವರು ಕೆಲವು ಕಾಲದ ವರೆಗೆ ಕಾಲಿಕಟ್ಟದ ಅರ
ಸನ ಕೂಡ ಜಗಳ ನಡಿಸಿದರು. ಮುಂದೆ ಅಲ್ಬುಕರ್ಕ ಎಂಬ ಸರದಾ
ರನು ಗೋವೆಯನ್ನು ಹಿಡಕೊಂಡ ಕೂಡಲೆ ಆದಿಲಶಹನು ದಂಡಿನೊಡನೆ
ಹೋಗಿ ಆ ಸ್ಥಳವನ್ನು ತಿರುಗಿ ತಕ್ಕೊಂಡನು. ಮರುವರ್ಷ (೧೫೧೦) ಆದಿಲ
ಶಹನು ಸತ್ತದ್ದರಿಂದ ಅವನ ಮಗ ಇಸ್ಮಾಯಿಲ ಆದಿಲಶಹನು ಪಟ್ಟವೇರಿ
ದನು. ಈ ಸಂಧಿಯಲ್ಲಿ ಅಲ್ಬುಕರ್ಕನು ಪುನಃ ಬಂದು ಹೋರಾಡಿ ಗೋವೆ
ಯನ್ನು ಪುನಃ ತಕ್ಕೊಂಡನು. ಇದು ಇಂದಿಗೂ ಪೋರ್ತುಗೀಜರ ವಶದಲ್ಲಿ
ಉಂಟು.

**ಇಸ್ಮಾಯಿಲ ಆದಿಲಶಹನು.**

ಇಸ್ಮಾಯಿಲನು ಚಿಕ್ಕವನಿದ್ದ ಕಾರಣ, ಅವನ ಮಂತ್ರಿಯಾದ ಕಮಾಲ
ಖಾನನು ರಾಜ್ಯಕಾರಭಾರವನ್ನೆಲ್ಲಾ ಆಕ್ರಮಿಸಿ, ಇಸ್ಮಾಯಿಲನನ್ನು ಸೆರೆ
ಯಲ್ಲಿಟ್ಟು, ತಾನೇ ಬಾದಶಹನಾಗಲಿಕ್ಕೆ ಹವಣಿಸಿದನು.
ಆದರೆ ಇಸ್ಮಾಯಿಲನ ತಾಯಿಯು (ಇವಳು ಒಬ್ಬ ಮಹಾ
ರಾಷ್ಟ್ರ ಸರದಾರನ ಮಗಳು) ಯುಕ್ತಿಯಿಂದ ಕಮಾಲ
ನನ್ನು ಕೊಲ್ಲಿಸಿ, ಆತನ ರುಂಡವನ್ನು ಭಾಲೆಗೆ ಚುಚ್ಚಿಸಿ, ಬೀದಿ ಬೀದಿಗೆ ತಿರು
ಗಿಸಿದಳು. ಅದರಿಂದ ಪಟ್ಟಣದೊಳಗೆಲ್ಲ ಶಾಂತತೆಯುಂಟಾಯಿತು (೧೫೧೧).
ಈ ಕದನದಲ್ಲಿ ಖುಸರಾವು ಎಂಬ ತುರ್ಕೀ ಗುಲಾಮನು ಬಹಳ ಶೌರ್ಯ
ತೋರಿಸಿದ್ದರಿಂದ ಬಾದಶಹನು ಅವನಿಗೆ ಅಸದಖಾನ (ಹುಲಿಯಂಥ ಸರದಾರ)
ಎಂಬ ಬಿರುದು ಕೊಟ್ಟು, ಬೆಳಗಾವೀ ಪ್ರಾಂತವನ್ನು ಜಹಗೀರು ಹಾಕಿ
ಕೊಟ್ಟನು. ಈ ಅಸದಖಾನನು ಮುಂದೆ ಸ್ವಲ್ಪಕಾಲದೊಳಗೆ ಬಾದಶಹನ
ಮುಖ್ಯ ಪ್ರಧಾನನಾದನು. ಬೆಳಗಾವಿಯಲ್ಲಿರುವ ಅಸದಖಾನನ ದರ್ಗಾ
ಎಂಬ ಮಶೀದೆಗೆ ಈಗಲೂ ಮುಸಲ್ಮಾನರು ಬಹಳ ಮಾನ ಕೊಡುತ್ತಾರೆ.
ಮೇಲಿನ ವ್ಯಾಜ್ಯಗಳು ನಡೆದಾಗ ವಿಜಯನಗರದ ಎರಡನೇ ನರಸಿಂಗರಾಯನು
ಇಸ್ಮಾಯಿಲಶಹನನ್ನು ಸೋಲಿಸಿ, ರಾಯಚೂರು ಮುದಗಲ್ಲು ಈ ಎರಡು
ಕೋಟೆಗಳನ್ನು ತಕ್ಕೊಂಡನು. ಇಸ್ಮಾಯಿಲನು ದೊಡ್ಡ ಪರಾಕ್ರಮಿಯೂ
ಉದಾರನೂ ವಿದ್ಯಾಪಕ್ಷಪಾತಿಯೂ ಇದ್ದನು. ಇವನು ಬೀದರದ ಕೋಟೆ
ಯನ್ನು ಕೈವಶಮಾಡಿಕೊಂಡು ಅಲ್ಲಿಯ ಬೊಕ್ಕಸವನ್ನೆಲ್ಲ ತನ್ನ ದಂಡಿನವರಿಗೆ
ಹಂಚಿ ಕೊಟ್ಟನು; ಕಡೆಯಲ್ಲಿ ಗೋವಳಕೊಂಡಕ್ಕೆ ಮುತ್ತಿಗೆ ಹಾಕಿದಾಗ
ಉರಿ ಬಂದು ತೀರಿದನು (೧೫೩೪).

ಈ ಮೇರೆಗೆ ಮುಸಲ್ಮಾನರಲ್ಲಿ ಒಳಜಗಳಗಳು ನಡೆದು ಅವರು ದುರ್ಬಲರಾಗುತ್ತಿದ್ದಾಗ ೨ನೇ ನರಸಿಂಗರಾಯನ ಮಗನಾದ **ಕೃಷ್ಣರಾಯನು** ಇ. ಸ. ೧೫೦೯ರಲ್ಲಿ ವಿಜಯನಗರದಲ್ಲಿ ಪಟ್ಟಕ್ಕೆ ಬಂದನು. ಈತನು ಮಹಾಪರಾಕ್ರಮಿ ಎನಿಸಿಕೊಂಡು ವಿದ್ಯೆ ಕಲಾಕೌಶಲ್ಯ ಔದಾರ್ಯಗಳಲ್ಲಿ ವಿಖ್ಯಾತನಾದನು. ಮೂರು ವರ್ಷಗಳೊಳಗೆ ಇವನು ಪೂರ್ವದ ನಿಟ್ಟಿಗಿದ್ದ ಹಲವು ಸೀಮೆಗಳನ್ನು ವಶಮಾಡಿಕೊಂಡನು; ಮಧುರೆಯ ವರೆಗೆ ಯಾವತ್ತು ದೇಶವನ್ನು ವಶಮಾಡಿಕೊಂಡನು. ಇವನ ಕೈಕೆಳಗಿನ ಮಾಂಡಲಿಕರೂ ಪಾಳ್ಯಗಾರರೂ ಇವನಿಗೆ ಪೂರಾ ಅಂಕಿತರಾಗಿ ನಡೆಯಹತ್ತಿದರು. ಕೃಷ್ಣರಾಯನ ಸಂಪತ್ತನ್ನೂ ಸೈನ್ಯದ ಬಲವನ್ನೂ ನೋಡಿ ಪೋರ್ತುಗೀಜರು ಸಹ ಈತನ ಗೆಳೆತನವನ್ನು ಬೆಳಿಸಿದರು. ವಿಜಯನಗರದವರಿಗೂ ಮುಸಲ್ಮಾನರಿಗೂ ಕಳೆದ ೨೦೦ ವರ್ಷಗಳಿಂದ **ರಾಯಚೂರದ ದುಆಬದ** (ಎರಡು ಹೊಳೆಗಳ ನಡುವಿನ ಸೀಮೆ) ಬಗ್ಗೆ ಯುದ್ಧಗಳಾಗುತ್ತಿದ್ದವಷ್ಟೇ. ಈ ಸೀಮೆಯನ್ನು ಆಕ್ರಮಿಸುವ ಉದ್ದೇಶದಿಂದ ಸೈನ್ಯವನ್ನು ಸಿದ್ಧಪಡಿಸಿಕೊಂಡು ಕೃಷ್ಣರಾಯನು ಇ. ಸ. ೧೫೨೦ರಲ್ಲಿ ಹೊರಟನು. ಇಸ್ಮಾಯಿಲಶಹನು ಶೌರ್ಯದಿಂದ ಕಾದಿದನು. ಹಿಂದೂಜನರು ಓಡಹತ್ತಿದರು. ಆಗ ಕೃಷ್ಣರಾಯನು ಮಿಕ್ಕ ದಂಡಿನವರನ್ನೂ ಸರದಾರರನ್ನೂ ಹುರಿದುಂಬಿಸಿ ಕುದುರೆಯನ್ನೇರಿ ಶತ್ರುಸೈನ್ಯವನ್ನು ಹೊಕ್ಕು ಮುಸಲ್ಮಾನರ ಮೇಲೆ ಬಿದ್ದು ಪೂರ್ಣ ಜಯ ಪಡೆದನು. ಮುಂದೆ ಎಷ್ಟೋ ವರ್ಷಗಳ ವರೆಗೆ ಮುಸಲ್ಮಾನರಿಗೆ ಕೃಷ್ಣರಾಯನ ಭೀತಿಯೇ ಬಿಡಲಿಲ್ಲ. ಇತ್ತ ಹಿಂದೂಜನರು ಜಯದಿಂದ ಉಬ್ಬಿ ಮುಸಲ್ಮಾನರೊಡನೆ ಸೊಕ್ಕಿನಿಂದ ನಡೆಯಹತ್ತಿದರು. ಕೃಷ್ಣರಾಯನು ಗೋವೆಯ ಪ್ರಾಂತದಲ್ಲಿ ಸೇರಿ ವಿಜಾಪುರದ ದಂಡಿನವರನ್ನು ಗೆದ್ದು **ರಾಚೋಳ** ಎಂಬ ಕೋಟೆಯನ್ನು ಹಿಡಕೊಂಡನು. ಆಗ ಇಬ್ರಾಹಿಮಶಹನು ವಿಜಾಪುರದಲ್ಲಿ ಆಳುತ್ತಿದ್ದನು. ಇವನ ಒಬ್ಬ ಸರದಾರನು ಇವನ ಮೇಲೆ ತಿರುಗಿ ಬಿದ್ದು ವಿಜಾಪುರವನ್ನು ಮುತ್ತಲು, ಬಾದಶಹನು ಕೃಷ್ಣರಾಯನ ಸಹಾಯ ಬೇಡಿಕೊಂಡನು. ಆಗ **ವೆಂಕಟಾದ್ರಿಯೆಂಬ** ವಿಖ್ಯಾತನಾದ ದಳವಾಯಿಯು ಬಾದಶಹನ ಸಹಾಯಕ್ಕೆ ಹೋಗಿ ಆ ಸರದಾರನನ್ನು ಗೆದ್ದು ಓಡಿಸಿದನು. ಕೃಷ್ಣರಾಯನ ಆಳಿಕೆಯಲ್ಲಿ ಮುಸಲ್ಮಾನರು ವಿಜಯನಗರದ ಮೇಲೆ ಶಸ್ತ್ರ ಹಿಡಿದು ಒಮ್ಮೆಯೂ ಜಯ ಹೊಂದಲಿಲ್ಲ. ಈತನು ರಾಜಧಾನಿಯಲ್ಲಿ

**ಕೃಷ್ಣರಾಯನ ವಿಜಯಗಳು.**

ಹಲವು ಗುಡಿ ಗೋಪುರಗಳನ್ನು ಕಟ್ಟಿಸಿದನು. ಇವನು ಕಟ್ಟಿಸಿದ ಬಸವಣ್ಣನ ಕಾಲುವೆ, ಕೊರಗಲ್ಲೆಂಬ ಒಡ್ಡು ಇವುಗಳಿಂದ ಆ ಪ್ರಾಂತಕ್ಕೆ ಇನ್ನೂ ಲಾಭವಾಗುತ್ತಿದೆ. ಕೃಷ್ಣರಾಯನು ಮಹಾ ವಿದ್ಯಾಪಕ್ಷಪಾತಿಯು. ಇವನ ತರುವಾಯ ವಿಜಯನಗರದ

**ಕೃಷ್ಣರಾಯನ ಕಟ್ಟಡಗಳು.**



ಹಂಪಿ.

ಗೌರವವು ಕಳೆಗುಂದಿತು. ರಾಜ್ಯಾಧಿಕಾರದ ಸಲುವಾಗಿ ಕದನಗಳು ಮೊದಲಿನಂತೆ ಮತ್ತೆ ನಡೆದವು. ಕಡೆಗೆ ಸದಾಶಿವರಾಯನ ಆಳಿಕೆಯಲ್ಲಿ ಕೃಷ್ಣರಾಯನ ಅಳಿಯನಾದ ರಾಮರಾಯನು ಎಲ್ಲ ಅಧಿಕಾರವನ್ನು ನಡಿಸಿದನು. ರಾಮರಾಯನು ಶೂರನಿದ್ದನು. ವಿಜಾಪುರದ ಅಲ್ಲೀ ಆದಿಲಶಹನಿಗೂ ಅಹಮ್ಮದನಗರದವರಿಗೂ ಮೇಲಿಂದ ಮೇಲೆ ಕದನಗಳು ನಡೆಯುತ್ತಿದ್ದವು. ಇವುಗಳಲ್ಲಿ ಆದಿಲಶಹನು ರಾಮರಾಯನ ಸಹಾಯ ಬೇಡುತ್ತಿದ್ದನು. ಈತನು ಯುದ್ಧಕ್ಕೆ ಹೋಗಿ ಪರಾಕ್ರಮ ತೋರಿಸುತ್ತಿದ್ದನು. ಈ ಗೆಲವುಗಳಿಂದ ರಾಮರಾಯನು ಬಹಳ ಸೊಕ್ಕಿಗೆ ಬಂದನು. ವಿಜಯನಗರಕ್ಕೆ ಬಂದ ಮುಸಲ್ಮಾನ ಸರದಾರರಿಗೆ ಮಾನಮರ್ಯಾದೆಗಳು ನಡೆಯದಾದವು. ಇವನ ಸೈನ್ಯದವರು ಮುಸ

ಲ್ಮಾನರ ಧರ್ಮವನ್ನೂ ಹೆಂಗಸರನ್ನೂ ಅವಮಾನಪಡಿಸಹತ್ತಿದರು. ಮುಸ

**ರಾಮರಾಯನ ಜಯಗಳ ಪರಿಣಾಮ.**

ಲ್ಮಾನರು ಬಲಹೀನರಾದದ್ದನ್ನು ನೋಡಿ ರಾಮರಾಯನು ಆದಿಲಶಹನಿಗೂ ಕುತುಬಶಹನಿಗೂ ಕೆಲವು ಪ್ರಾಂತಗಳನ್ನು ಬೇಡಿದನು. ಉಪಾಯವಿಲ್ಲದೆ ಅವರು ಅವುಗಳನ್ನು ಕೊಟ್ಟು ಬಿಟ್ಟರು. ತಮ್ಮಲ್ಲಿ ಒಕ್ಕಟ್ಟಿಲ್ಲದ್ದರಿಂದ ತಮ್ಮ ಗತಿಯು ಹೀಗಾಯಿತೆಂದು ಮನಗಂಡು, **ಆದಿಲಶಹನು** ಮಿಕ್ಕ ಮುಸಲ್ಮಾನರಿಗೆ ತಿಳಿಸಿ ಹೇಳಿ, ಎಲ್ಲರನ್ನೂ ಕೂಡಿಸಿ ರಾಮರಾಯನ ಮೇಲೆ ಬೀಳುವ ಹಂಚಿಕೆ ಮಾಡಿದನು. ಆದಿಲಶಹನ ಹಗೆಯಾದ ನಿಜಾಮುಶಹನು ಇವನಿಗೆ ತನ್ನ ಮಗಳಾದ **ಚಾಂದಬೀಬಿಯನ್ನು** ಕೊಟ್ಟು ಲಗ್ನ ಮಾಡಿದನು. ಬರೀದಶಾಹಿಯ ಒಂದು ಪ್ರಾಂತದ ನೆವಮಾಡಿ ನಾಲ್ವರು ಮುಸಲ್ಮಾನ ಅರಸರು ರಾಮರಾಯನ ಕೂಡ ಯುದ್ಧ ಹೂಡಿದರು. **ತಾಳೀಕೋಟೆಯ** ನೆರೆಯಲ್ಲಿ ಈ ಹೆಸರಾದ ಯುದ್ಧವು ಇ. ಸ. ೧೫೬೫ರಲ್ಲಿ ಆಯಿತು. ರಾಮರಾಯನು ೯೬ ವರುಷದ ಮುದುಕನಿದ್ದರೂ ತರುಣನ ಹಾಗೆ ಉತ್ಸಾಹದಿಂದ ಜನರನ್ನು ಹುರಿದುಂಬಿಸುತ್ತಿದ್ದನು. ಅವನಿಗೆ ವಿಜಯದ ಬಗ್ಗೆ ಎಳ್ಳಷ್ಟಾದರೂ ಸಂಶಯವಿರಲಿಲ್ಲ. ವೆಂಕಟಾದ್ರಿಯೂ ಇಳೋತ್ತಮ ರಾಜನೂ ಬಹು ಪರಾಕ್ರಮದಿಂದ ಹೋರಾಡಿ ಹಗೆಗಳನ್ನು ಓಡಿಸುತ್ತಿದ್ದರು. ಇಷ್ಟರಲ್ಲಿ ಕನ್ನಡಿಗರ



ಆದಿಲಶಹ.

**೧೫೬೫.**



ಚಾಂದಬೀಬಿ.

ದುರ್ದೈವದಿಂದ ರಣದಲ್ಲಿ ಒಂದು ಮದ್ದಾನೆಯು ಭ್ರಾಂತವಾಗಿ ರಾಮರಾಯನ ಪಲ್ಲಕ್ಕಿಯ ಹತ್ತರ ಬರಲು ಬೋಯಿಗಳು ಪಲ್ಲಕ್ಕಿಯನ್ನು ಚಲ್ಲಿ ಓಡಿಹೋದರು. ರಾಮರಾಯನು ಶತ್ರುಗಳ ಕೈಯಲ್ಲಿ ಸಿಕ್ಕನು. ನಿಜಾಮಶಹನು ಆವನ ರುಂಡ ವನ್ನು ಕೊಯಿದು ಬರ್ಚಿಗೆ ಚುಚ್ಚಿಸಿ ಹಿಂದೂ ಸೈನ್ಯದವರಿಗೆ ಕಾಣುವಂತೆ ತಿರುಗಿಸಿದನು. ಇವರು ಬೆದರಿ ಓಡಹತ್ತಿದರು. ಮುಸಲ್ಮಾನರು ಅವರನ್ನು ಬೆನ್ನಟ್ಟಿ ಮಾಡಿದ ಕೊಲೆಗೆ ಅಳವಿಲ್ಲ. ರಣದಿಂದ ಇವರು ರಾಜಧಾನಿಗೆ ಬರು ವಷ್ಟರಲ್ಲಿ ಅರಸುಕುಮಾರರು ಬೊಕ್ಕಸವನ್ನೆಲ್ಲ ಬಳಕೊಂಡು ಓಡಿಹೋಗಿದ್ದರು. ವಿಜಯನಗರವನ್ನು ಶತ್ರುಗಳು ಒಂದೇ ಸವನೆ ೫ ತಿಂಗಳು ಸುಲಿದರು. ಆ ಭವ್ಯವಾದ ಪಟ್ಟಣವು ನೆಲಸಮವಾಯಿತು. ಇಡಿ ಜಗತ್ತಿನ ಇತಿಹಾಸದಲ್ಲಿ ಇಂಥ ಭಯಂಕರವಾದ ಹಾವಳಿಯು ಇಂಥ ಭವ್ಯ ಪಟ್ಟಣದ ಮೇಲೆ ಇಷ್ಟು ಸ್ವಲ್ಪ ಕಾಲದಲ್ಲಿ ಎಂದೂ ನಡೆದಂತೆ ಕಂಡುಬರುವದಿಲ್ಲ.

**"ಹಂಪಿಯ ಹಾಳು"** ಎಂದು ಜಗದಲ್ಲೆಲ್ಲ ಹೆಸರಾಗಿರುವ ವಿಜಯನಗ ರದ ಸೌಭಾಗ್ಯದ ಭವ್ಯ ಕುರುಹುಗಳನ್ನು ನೋಡಿ ಪ್ರವಾಸಿಕರು ಇಂದಿಗೂ ಚಕಿತರಾಗುತ್ತಾರೆ. ಈ ಪಟ್ಟಣದ ಎರಡು ಕಡೆಗೆ ಕಡಿದಾದ ದಿನ್ನೆಗಳು ಹಬ್ಬಿವೆ. ಉತ್ತರಕ್ಕೆ ತುಂಗಭದ್ರೆಯು ತೀವ್ರವಾಗಿ ಹರಿಯುತ್ತಿರುವದು. ಪಟ್ಟ ಣದ ೬೦ ಮೈಲು ಪರಿಘದ ಸುತ್ತಲು ೭ ಭದ್ರವಾದ ಕೋಟೆಗಳ ಗುರುತು ಇರುವದು. ೨ನೇ ದೇವರಾಯನ ಆಳಿಕೆಯಲ್ಲಿ ಇರಾಣದ **ಶಹನ ರಾಯ ಭಾರಿಯಾಗಿ** ಬಂದಿದ್ದ **ಅಬ್ದುಲ್ ರಝಾಕ್** ಎಂಬವನು ಈ ಪಟ್ಟಣದ ವೈಭವ ವನ್ನು ಸರಸವಾಗಿಯೂ ಉಲ್ಲಾಸದಿಂದಲೂ ಬರೆದಿರುವನು. ಆಳೆತ್ತರವಾದ ಬಂಡೆಗಳನ್ನು ನೆಲದೊಳಗೆ ಅರ್ಧ ಹುಗಿದು ಕುದುರೆಯೂ ಮನುಷ್ಯರೂ ಒಳ ಸೇರದಂತೆ ಮಾಡಿ ಮೊದಲನೆಯ ಕೋಟೆಯನ್ನು ಕಟ್ಟಿರುವರು. ಇದನ್ನು ಅಗಸೆಯಿಂದ ದಾಟಿ ಒಳಗೆ ಹೋದ ಬಳಿಕ ಬೆಳೆಗಳಿಂದ ತುಂಬಿದ ಭತ್ತದ ಗದ್ದೆಗಳೂ ಫಲಗಳಿಂದ ತುಂಬಿದ ಮನೋಹರವಾದ ತೋಟಗಳೂ ದೃಷ್ಟಿಗೆ ಬೀಳುತ್ತಿದ್ದವು. ಮೂರನೆಯ ಕೋಟೆಯೊಳಗೆ ಜನವಸತಿಯಿಂದ ತುಂಬಿದ ಅಂಗಡಿಬೀದಿಗಳೂ ಮನೆಗಳೂ ಕಾಣುತ್ತಿದ್ದವು. ವಿಜಯನಗರದ ಬೀದಿಗಳು ಉದ್ದವಾಗಿಯೂ ಅಗಲವಾಗಿಯೂ ಚಿತ್ರಿಸಿ ಮಾಡಿದಂತೆ ಬಹು ಚಂದವಿರು ವವು. ಬೀದಿಗಳ ಕೊನೆಗಳಲ್ಲಿ ಅಂದವಾದ ಕಲ್ಲಿನ ಮಂಟಪಗಳಿದ್ದವು. ತುಂಗ ಭದ್ರೆಯ ಶುಭ್ರವಾದ ನೀರಿನ ಕಾಲುವೆಗಳು ಮಂದವಾಗಿ ಹರಿಯುತ್ತಿದ್ದವು.

ಅಂಗಡಿಗಳಲ್ಲಿ ಮುತ್ತು ಮಾಣಿಕ ವಜ್ರಗಳ ವ್ಯಾಪಾರವು ಭರದಿಂದ ನಡೆಯು ತ್ತಿತ್ತು. ದೂರದೂರದ ದೇಶಗಳ ವ್ಯಾಪಾರಸ್ಥರು ಅಲ್ಲಲ್ಲಿ ಕಾಣುತ್ತಿದ್ದರು. ಪರ ದೇಶಗಳಿಂದ ಬರುವ ಹಾಗು ಅಲ್ಲಿಗೆ ಹೋಗುವ ಸರಕುಗಳ ಚಕ್ಕಡಿಗಳು ಯಾವಾ ಗಲೂ ಲೆಕ್ಕವಿಲ್ಲದೆ ಓಡಾಡುತ್ತಿದ್ದವು. ಮುತ್ತು ವಜ್ರ ಚಿನ್ನದಾಭರಣಗಳ ನ್ನಿಟ್ಟುಕೊಂಡು ಬೀದಿಯಲ್ಲಿ ಓಡಾಡುವ ಜನರು ಸಾಮ್ರಾಜ್ಯದ ಶ್ರೀಮಂತಿಕೆಗೆ ಸಾಕ್ಷಿಯಾಗಿದ್ದರು. ಅಲ್ಲಲ್ಲಿಗೆ ಗುಲಾಬಿಯೇ ಮೊದಲಾದ ಹೂವಿನ ಸಣ್ಣ



ವಿಜಯನಗರದ ಗಜಶಾಲೆ.

ದೊಡ್ಡ ಅಂಗಡಿಗಳಿದ್ದವು. ಸುತ್ತಲು ಅಲ್ಲಲ್ಲಿ ಬಂಗಾರದ ಕಳಸಗಳಿಂದ ಒಪ್ಪುವ ಗುಡಿಗಳು ಎದ್ದು ಕಾಣುತ್ತಿದ್ದವು. ಕೃಷ್ಣಾನದಿಯಿಂದ ಕನ್ಯಾಕುಮಾರಿಯ ಭೂಶಿರದ ವರೆಗೆ ಹಬ್ಬಿದ್ದ ದೊಡ್ಡ ಸಾಮ್ರಾಜ್ಯದ ರಾಜಧಾನಿಯಾಗಿದ್ದು, ಸುಮಾರು ೨೦ ಲಕ್ಷ ಜನವಸತಿಯುಳ್ಳ ಈ ವಿಶಾಲವಾದ ಪಟ್ಟಣವನ್ನು ನೋಡಿ ಪ್ರವಾಸಿಗಳು ಬೆರಗಾದದ್ದು ಸೋಜಿಗವಲ್ಲ. ನಾಲ್ಕನೆಯ ಕೋಟೆ ಯೊಳಗೆ ಹೋದ ಕೂಡಲೆ ನಾಯಕರೇ ಮೊದಲಾದ ಶ್ರೀಮಂತರ ಮಂದಿರ ಗಳು ಕಾಣುತ್ತಿದ್ದವು. ಕೊನೆಯ ಕೋಟೆಯ ಒಳಭಾಗದಲ್ಲಿ ಸುಮಾರು

ಮೂರು ಚಚ್ಚೌಕು ಮೈಲು ಪ್ರದೇಶದಲ್ಲಿ ಸುಂದರವಾದ ಅರಮನೆ, ದಿವಾಣ ಖಾನೆ, ದಫ್ತರಖಾನೆ, ಗಜಶಾಲೆ, ಹಯಶಾಲೆ, ಟಂಕಶಾಲೆ, ಕೋಶಶಾಲೆ ಮೊದಲಾದ ಕಟ್ಟಡಗಳು ಇದ್ದವು. ವಿಜಯನಗರದ ಖಜಾನೆಯಲ್ಲಿ ಅಪರಿಮಿತ ದ್ರವ್ಯವಿತ್ತೆಂದು ಪ್ರವಾಸಿಗಳು ಬರೆದಿರುವರು. ಈ ಭವ್ಯಮಂದಿರಗಳಲ್ಲಿ ಒಂದೆರಡರ ಕುರುಹುಗಳು ಮಾತ್ರ ಸದ್ಯಕ್ಕೆ ಅಲ್ಲಿ ಉಳಿದಿರುವವು. ವಿಜಯ ನಗರದ ಅರಸರ ಅರಮನೆಯ ಒಂದು ಕಲ್ಲಿನ ಮೇಲೆ ಮತ್ತೊಂದು ಕಲ್ಲನ್ನು ಇದ್ದಕ್ಕೆ ಇದ್ದ ಹಾಗೆ ಮುಸಲ್ಮಾನರು ಉಳಿಯಗೊಟ್ಟಿಲ್ಲ. ೨೦೦ ವರ್ಷಗಳ ಹೊಟ್ಟೆಯೊಳಗಿನ ಕಿಚ್ಚು ೫ ತಿಂಗಳುಗಳಲ್ಲಿ ಈ ಪರಿಯ ವಿಧ್ವಂಸದಿಂದ ಸಮಾಧಾನ ಹೊಂದಿದಂತೆ ತೋರುತ್ತದೆ.



# ಅರ್ವಾಚೀನ ಕಾಲದ ಕರ್ನಾಟಕ.

## ೧೦ನೇ ಪ್ರಕರಣ.

## ಮುಸಲ್ಮಾನರು, ಮಹಾರಾಷ್ಟ್ರರು, ಮೈಸೂರು ಸಂಸ್ಥಾನ.

(೧೬ನೇ ೧೭ನೇ ಶತಮಾನಗಳು.)

ವಿಜಯನಗರದ ಕೂಡ ಕರ್ನಾಟಕದ ವೈಭವವು ಹೋಯಿತು. ಮುಂದೆ ಕರ್ನಾಟಕದಲ್ಲಿ ದಕ್ಷಿಣದಲ್ಲಿ ಮುಸಲ್ಮಾನರೂ ಮೈಸೂರಿನ ಒಡೆಯರೂ ಉತ್ತರ ದಲ್ಲಿ ಮುಸಲ್ಮಾನರೂ ಮಹಾರಾಷ್ಟ್ರರೂ ಒಡೆತನಕ್ಕೆ ಬಡಿದಾಡಹತ್ತಿದರು. ಸಾಮ್ರಾಜ್ಯವು ಒಡೆದು ಪುಡಿಯಾದ ಕೂಡಲೆ ವ್ಯಾಪಾರದಿಂದ ಪ್ರಬಲರಾಗು ತ್ತಿದ್ದ ಪೋರ್ತುಗೀಜರೂ ಕಳೆಗುಂದಿದರು. ಇಷ್ಟರಲ್ಲಿ ಯುರೋಪಖಂಡದಿಂದ ಇಂಗ್ಲಿಷರೂ ಫ್ರೆಂಚರೂ ಬಂದು ಈಸ್ಟ ಇಂಡಿಯ ಕಂಪನಿ ಎಂಬ ಸಂಘ ಗಳನ್ನು ಸ್ಥಾಪಿಸಿ ದೇಶದ ವ್ಯಾಪಾರವನ್ನು ಹಿಡಕೊಳ್ಳಲಿಕ್ಕೆ ಯತ್ನಿಸುತ್ತಿದ್ದರು. ಈ ಕಾಲದಲ್ಲಿ ಕನ್ನಡ ನಾಡು ಬಹಳ ಹೀನ ಸ್ಥಿತಿಯಲ್ಲಿತ್ತು.

**ವಿಜಾಪುರವು ಪ್ರಬಲವಾದದ್ದು.**

ವಿಜಯನಗರದ ಪ್ರಳಯವು ಆದ ಬಳಿಕ ಅಲ್ಲೀ ಆದಿಲಶಹನು ವಿಜಾ ಪುರದಲ್ಲಿ ಪ್ರಬಲನಾಗ ಹತ್ತಿದನು. ಇವನು **ಆದವಾನಿ, ಬಂಕಾಪುರ, ತೊರ ಗಲ್ಲು, ಧಾರವಾಡ, ಸೀರಾ, ಚಿತ್ರದುರ್ಗ** ಮುಂತಾದ ಭದ್ರವಾದ ಕೋಟೆ ಗಳನ್ನೂ ಅವುಗಳ ಕೆಳಗಿನ ಸೀಮೆಗಳನ್ನೂ ವಶಮಾಡಿ ಕೊಂಡನು. ಇವನು ಧಾರವಾಡದ ಕೋಟೆಯನ್ನು ವಿಸ್ತರಿಸಿ, ಅದರ ಬಾಗಿಲ ಮೇಲೆ ತನ್ನ ಹೆಸರು ಹಾಕಿಸಿ ದ್ದಾನೆ. ಇವನು ಇ. ಸ. ೧೫೭೯ರಲ್ಲಿ ತೀರಿದನು.

**ಕಾಮಿಲಖಾನನೂ ಚಾಂದಬೀಬಿಯೂ.**

ಅಲ್ಲೀ ಆದಿಲಶಹನ ತರುವಾಯ **ಎರಡನೇ ಇಬ್ರಾಹಿಮಶಹನು** ಪಟ್ಟ ವೇರಿದನು. ಅವನು ಚಿಕ್ಕವನಿದ್ದದರಿಂದ ಅವನ ದೊಡ್ಡವ್ವ **ಚಾಂದಬೀಬಿಯು ಕಾಮಿಲಖಾನನೆಂಬ** ವಜೀರನ ಸಹಾಯದಿಂದ ಕಾರಭಾರ ನಡಿಸಿದಳು. ಆಕೆ ಹೆಂಗಸಿದ್ದರೂ ಆಕೆ ಯ ಚಾತುರ್ಯಶೌರ್ಯಗಳು ಹೊಗಳತಕ್ಕಂಥವು. ಆದರೆ ಕಾಮಿಲಖಾನನು ಅವಿಚಾರಿಯೂ ಕ್ರೂರನೂ. ಇವನ ತ್ರಾಸಕ್ಕೆ

ಎಷ್ಟೋ ಜನರು ರಾಜಧಾನಿ ಬಿಟ್ಟು ಹೋದರು. ರಾಜ್ಯದಲ್ಲಿ ಬಹಳ ಅವ್ಯವಸ್ಥೆಯುಂಟಾಯಿತು. ಈ ಸಂಧಿ ಸಾಧಿಸಿ ಅಹಮ್ಮದನಗರ ಗೋವಳಕೊಂಡಗಳ ಅರಸರು ಬಂದು ವಿಜಾಪುರಕ್ಕೆ ಮುತ್ತಿಗೆ ಹಾಕಿದರು. ಆಗ ಚಾಂದಬೀಬಿಯು ಕಾಮಿಲಖಾನನ ಅಧಿಕಾರ ತೆಗೆದು, ಮುನಿದು ಹೋದ ಸರದಾರರನ್ನು ಪ್ರಾರ್ಥಿಸಿ ಕರಿಸಿಕೊಂಡಳು. ಅವರು ಬಂದವರೇ ಮುತ್ತಿಗೆ ಹಾಕಿದವರಿಗೆ ಕೂಳು ನೀರು ಸಿಕ್ಕದ ಹಾಗೆ ಸುತ್ತಲಿನ ದೇಶವನ್ನೆಲ್ಲ ಹಾಳುಗೆಡಹಿದರು. ಅದರಿಂದ ಶತ್ರುಗಳು ಮುತ್ತಿಗೆ ತೆಗೆದು ಸೋತುಹೋದರು. ಮುಂದೆ **ದಿಲಾವರಖಾನನೆಂಬ** ವಜೀರನು ಚನ್ನಾಗಿ ಕಾರಭಾರ ನಡಿಸಿದನು. ಬಳಿಕ ಇ. ಸ. ೧೫೯೧ರಲ್ಲಿ ಬಾದಶಹನು ತಾನೇ ಆಳಹತ್ತಿದನು. ಇವನ ಆಳಿಕೆಯಲ್ಲಿ **ಹೊಸಕೋಟೆ, ಬೆಂಗಳೂರು** ಮುಂತಾದ ಪ್ರಾಂತಗಳು ವಿಜಾಪುರದ ರಾಜ್ಯಕ್ಕೆ ಸೇರಿದವು. ಇವನು ಬಹು ಚತುರನೂ ನೀತಿವಂತನೂ ಇದ್ದನು; ಸ್ವಾದಿಯ ಅರಸನನ್ನೂ ಜೇರೆ ಹಲವು ನಾಯಕರನ್ನೂ ಬಹುಮಾನ ಮಾಡಿ ತನ್ನ ಪಕ್ಷಕ್ಕೆ ಒಲಿಸಿಕೊಂಡನು. ಇವನು ಇ. ಸ. ೧೬೨೬ರಲ್ಲಿ ಮರಣ ಹೊಂದಿದನು.

ತರುವಾಯ ಬಾದಶಹನಾದ **ಮಹಮ್ಮದಶಹನಲ್ಲಿ** ರಾಜನಿಗೆ ಅವಶ್ಯವಾದ ಗುಣಗಳಿರಲಿಲ್ಲ. ಇವನು ರಾಜ್ಯಭಾರವನ್ನೆಲ್ಲ **ಮುರಾರಿಪಂತನೆಂಬ** ಪ್ರಧಾನಿಯ ಮೇಲೆ ಚಲ್ಲಿ, ತಾನು ರಾಜಧಾನಿಯನ್ನು ಭವ್ಯ ಮಂದಿರಗಳಿಂದ ಅಲಂಕರಿಸುವದರಲ್ಲಿ ತೊಡಗಿದನು. ಇವನು ಕಟ್ಟಿಸಿದ ಇಬ್ರಾಹಿಮ **ರೋಜಾ, ಗೋಲಘುಮುಟ, ಆಸಾರಮಹಾಲು** ಮುಂತಾದ ಕಟ್ಟಡಗಳು ನೋಡತಕ್ಕಂಥವಿರುವವು. ಇದಲ್ಲದೆ ಇವನು ನಳ ಹಾಕಿಸಿ ಪಟ್ಟಣದೊಳಗೆ ನೀರು ತಂದನು. ಈ ಕೆಲಸದಲ್ಲಿಯೇ ಬಾದಶಹನು ತೊಡಗಿದ್ದರಿಂದ, ರಾಜ್ಯದಲ್ಲಿ ನಾಲ್ಕೂ ಕಡೆಗೆ ಅವ್ಯವಸ್ಥೆಯುಂಟಾಯಿತು. ದಿಲ್ಲಿಯ ಮೊಗಲ ಚಕ್ರವರ್ತಿಯ ಸರದಾರನು ಅಹಮ್ಮದನಗರದ ರಾಜ್ಯವನ್ನು ಹಾಳುಮಾಡಿ, ವಿಜಾಪುರದ ಸೀಮೆಯೊಳಗೆ ಹೊಕ್ಕು ಕೊಲ್ಲಾಪುರ, ರಾಯಬಾಗ ಮುಂತಾದ ಪ್ರಾಂತಗಳನ್ನು ಹಾಳುಮಾಡಿ, ವಿಜಾಪುರವನ್ನು ಮುತ್ತಿದನು. ಆಗ ಮಹಮ್ಮದಶಹನ ಬಳಿಯಲ್ಲಿ ತಕ್ಕಷ್ಟು ಸೈನ್ಯವಿಲ್ಲದ್ದರಿಂದ ಅವನು ಬಾದಶಹನಿಗೆ ವರ್ಷಕ್ಕೆ ೨೦ ಲಕ್ಷ ಹೊನ್ನು ಕೊಡುತ್ತೇನೆಂದು ಒಪ್ಪಂದ ಮಾಡಿಕೊಂಡನು (೧೬೩೬).

**ಮುರಾರಿ ಪಂತನ ಆಳಿಕೆ.**

ಇಷ್ಟರಲ್ಲಿ ವಿಜಾಪುರ ಅಹಮ್ಮದನಗರದ ರಾಜ್ಯಗಳೊಳಗೆ ಕೆಲವು ಸಣ್ಣ ಪುಟ್ಟ ದೇಶೀಯ ಸಂಸ್ಥಾನಿಕರೂ ಮಹಾರಾಷ್ಟ್ರ ಸರದಾರರೂ ಹೆಸರಿಗೆ ಬಂದಿದ್ದರು. ಇಬ್ರಾಹಿಮನ ಆಳಿಕೆಯಲ್ಲಿ **ವಿಟ್ಟಪ್ಪನೆಂಬ** ಸರದಾರನು **ಕೊಕಟನೂರದ** ದೇಶಮುಖಿಯನ್ನು ದೊರಕಿಸಿದ್ದನು. ಮುಂದೆ ಅಲ್ಲೀ ಆದಿಲಶಹನ ಆಳಿಕೆಯಲ್ಲಿ ಇವನು **ತೊರಗಲ್ಲು** ಮುಂತಾದ ಕೋಟೆಗಳನ್ನು ತಕ್ಕೊಂಡಿದ್ದನು. ಇದಕ್ಕೆ ಮೆಚ್ಚಿ ಬಾದಶಹನು ಆತನು ಗೆದ್ದುಕೊಂಡ ಪ್ರಾಂತದ ಒಡೆತನವನ್ನು ಆತನಿಗೇ ಕೊಟ್ಟನು. ಇವನೇ **ಶಿರಸಂಗಿಯ ದೇಸಾಯರ** ಮೂಲಪುರುಷನು. ಮುರಾರಿಪಂತನ ಆಳಿಕೆಯಲ್ಲಿ **ಶಹಾಜೀ** ಭೋಸಲೆ ಎಂಬವನು ವಿಜಾಪುರದ ಬಾದಶಹನ ಆಶ್ರಯಕ್ಕೆ ಬಂದು ನಿಂತು ಇ. ಸ. ೧೬೩೭ರಲ್ಲಿ **ಪುಣೆ, ಸುಪೆ** ಇವೆರಡು ಪರಗಣೆಗಳ ಜಹಗೀರು **ಪಡೆದನು.** ಅದೇ ವರುಷ ಇವನು ದಕ್ಷಿಣಕರ್ನಾಟಕಕ್ಕೆ ಹೋಗಿ ಬಹು ಜನ ನಾಯಕರನ್ನು ಗೆದ್ದು, ಬಹಳ ಹಣವನ್ನೂ ಸೀಮೆಯನ್ನೂ ಸಂಪಾದಿಸಿದ್ದರಿಂದ ಬಾದಶಹನು ಶಹಾಜಿಗೆ **ಕೊಲ್ಲಾರ, ಸಿರಾ, ಬೆಂಗಳೂರ, ಹೊಸಕೋಟೆ, ಬಾಳಾಪುರ** ಎಂಬ ಪರಗಣೆಗಳ ಜಹಗೀರು ಹಾಕಿ ಕೊಟ್ಟನು.

**ಸಣ್ಣ ಸರದಾರರ ಉದಯ.**

ಇತ್ತ ಮೈಸೂರಿನಲ್ಲಿ ಬಹು ಕಾಲದಿಂದ ಒಡೆಯರೆಂಬ ನಾಯಕರು ವಿಜಯನಗರದ ಸ್ವಾಮಿತ್ವದಲ್ಲಿ ಸುಭೇದಾರರಿಗೆ ಅಂಕಿತರಾಗಿ ಅಲ್ಲಲ್ಲಿ ಆಳುತ್ತಿದ್ದರು. ಇ. ಸ. ೧೬೦೦ರ ಸುಮಾರಿಗೆ ವಿಜಯನಗರದ ಸಾಮ್ರಾಜ್ಯದ ತೇಜವು ಪೂರ್ಣ ಅಡಗಿತ್ತು. ಶ್ರೀರಂಗಪಟ್ಟಣದ ಸುಭೇದಾರನು ಹೆಸರಿಗೆ ಮಾತ್ರ ಇದ್ದನು. ಮೈಸೂರಿನ ಒಡೆಯರು ಸ್ವತಂತ್ರರಾಗುತ್ತಿದ್ದರು. ಇವರಲ್ಲಿ **ರಾಜ ಒಡೆಯನೆಂಬ**ವನು ಶೂರನೂ ವಿಚಾರಿಯೂ ಇದ್ದನು; ಇತರ ಒಡೆಯರೊಡನೆ ಕಾದಾಡಿ ತನ್ನ ಸೀಮೆಯನ್ನು ಬೆಳಿಸಿದ್ದಲ್ಲದೆ **ಶ್ರೀರಂಗಪಟ್ಟಣದ** ಸುಭೇದಾರನನ್ನು ಸೋಲಿಸಿ ಸ್ವತಂತ್ರನಾಗಿ ಸದ್ಯದ **ಮೈಸೂರ ಜಿಲ್ಹೆಯನ್ನು** ಅರಸನಂತೆ ಆಳಿದನು. ತಾನು ಗೆದ್ದ ಪ್ರಾಂತಗಳಿಗೆ ತಕ್ಕ ಅಧಿಕಾರಸ್ಥರನ್ನು ಆರಿಸಿ ನೇಮಿಸಿ, ರಾಜ ಒಡೆಯನು ಎಚ್ಚರದಿಂದ ತಾನೇ ರಾಜ್ಯವ್ಯವಸ್ಥೆಯನ್ನು ಮೇಲ್ವಿಚಾರಿಸುತ್ತಿದ್ದನು. ರಾಜ್ಯವು ಬೆಳೆದದ್ದರಿಂದ ಇವನು ದಳವಾಯಿ ಎಂಬ ಅಧಿಕಾರಿಯನ್ನು ನೇಮಿಸಿದನು. ದಳವಾಯಿಯು ಮುಖ್ಯ ಮಂತ್ರಿಯ ಹಾಗು ಸೇನಾ

**ವಿಜಯನಗರ ೧೬೦೦.**

ಪತಿಯ ಕೆಲಸಗಳನ್ನು ಮಾಡುತ್ತಿದ್ದನು. ಇ. ಸ. ೧೬೧೭ರಲ್ಲಿ ರಾಜ ಒಡೆಯನು ತೀರಿಕೊಂಡನು. ಇವನ ಮೊಮ್ಮಗನಾದ **ಚಾಮರಾಜನು** ಮಿಕ್ಕ ಒಡೆಯರನ್ನು ತಲೆಯೆತ್ತಗೊಡದೆ, ರೈತರನ್ನು ಸಮಾಧಾನದಿಂದಿಟ್ಟು ಅಜ್ಜನು ಕೊಟ್ಟ ಅರಸೊತ್ತಿಗೆಯನ್ನು ಎಚ್ಚರದಿಂದ ಕಾಪಾಡಿದನು. ಇ. ಸ. ೧೬೩೭ರಲ್ಲಿ ಇವನು ತೀರಿಕೊಂಡನು.

**ಶಿವಾಜಿ.**

ಶಹಾಜಿಯ ಮಗನಾದ **ಶಿವಾಜಿಯು ಶಿವನೇರಿ** ಎಂಬ ಕೋಟೆಯಲ್ಲಿ ಇ. ಸ. ೧೬೨೭ರಲ್ಲಿ ಹುಟ್ಟಿ, ಈ ಸುಮಾರಿಗೆ ತನ್ನ ತಂದೆಯ ಕಾರಭಾರಿಯಾದ ದಾದಾಜಿ ಕೋಂಡದೇವನೆಂಬ ಬ್ರಾಹ್ಮಣನ ಶಿಕ್ಷೆಯಲ್ಲಿದ್ದನು. ಇವನು ಓದಬರೆಯಲಿಕ್ಕೆ ಮನಮೆಚ್ಚಿ ಕಲಿಯದಿದ್ದರೂ ಕುದುರೆಯ ಮೇಲೆ ಕೂಡ್ರೋಣ, ಪಟ್ಟೆ ಆಡೋಣ ಮುಂತಾದ ಯುದ್ಧೋಪಯುಕ್ತವಾದ ವಿದ್ಯೆಯನ್ನು ಚನ್ನಾಗಿ ಆಸ್ಥೆಯಿಂದ ಕಲಿತನು. ಮುಸಲ್ಮಾನರನ್ನು ಮುರಿದು ಹಿಂದೂ ರಾಜ್ಯವನ್ನು ಸ್ಥಾಪಿಸಬೇಕೆಂಬ ಇಚ್ಛೆ ಚಿಕ್ಕಂದಿನಲ್ಲಿಯೇ ಆತನ ಮನಸಿನಲ್ಲಿ ಹೊಕ್ಕಿತ್ತು. ಶಿವಾಜಿಯ ಬಯಕೆಯು ನೆರವೇರಲಿಕ್ಕೆ ಕಾಲವು ಬಹಳ ಅನುಕೂಲವಾಗಿತ್ತು. ಆಗ ವಿಜಾಪುರದ ರಾಜ್ಯವು ಬಲಹೀನವಾಗಿತ್ತು. ಮೊಗಲರು ದಕ್ಷಿಣದಲ್ಲಿ ಪ್ರಬಲರಾಗಿದ್ದಿಲ್ಲ. ಅವನು ಪ್ರೌಢನಾದ ಕೂಡಲೆ **ಮಾವಳೇ** ಎಂಬ ಗುಡ್ಡಗಾಡ ಜನರ ಸ್ನೇಹ ಸಂಪಾದಿಸಿ, ವಿಜಾಪುರದ ರಾಜ್ಯದೊಳಗಿನ ಕೆಲವು ಕೋಟೆಗಳನ್ನು ತಕ್ಕೊಂಡು, **ರಾಯಗಡ**ವೆಂಬ ಹೊಸ ಕೋಟೆಯನ್ನು ಕಟ್ಟಿಸಿ, ಮಾವಳೇ ಜನರ ದಂಡು ಕೂಡಿಸಿಕೊಂಡು, ಘಟ್ಟದ ಮೇಲೆಯೂ ಕೆಳಗೂ ಎಷ್ಟೋ ಪ್ರದೇಶವನ್ನು ಕೈವಶಮಾಡಿಕೊಂಡನು (೧೬೪೬). ಆಗ ಮಹಮ್ಮದಶಹನು ಎಚ್ಚತ್ತು ಶಿವಾಜಿಯನ್ನು ದಂಡಿಸುವ ಹಂಚಿಕೆ ಹಾಕಿದನು. ಅವನು ಕಪಟದಿಂದ ಶಹಾಜಿಯನ್ನು ದಕ್ಷಿಣದಿಂದ ಹಿಡಿದು ತರಿಸಿ ವಿಜಾಪುರದೊಳಗೆ ಕತ್ತಲೆ ಕೋಣೆಯೊಳಗೆ ಸೆರೆಯಿಟ್ಟನು. ಆದರೆ ಈ ಬೆದರಿಕೆಯ ಯುಕ್ತಿಗೆ ಶಿವಾಜಿಯು ಅಂಜಲಿಲ್ಲ. ಅವನು ದಿಲ್ಲಿಯ ಚಕ್ರವರ್ತಿಯ ಸ್ನೇಹ ಸಂಪಾದಿಸಿಕೊಂಡಿದ್ದನು; ಹಾಗು ತಂದೆಯ ಬಿಡುಗಡೆ ಆಗುವ ಬಗ್ಗೆ ಆ ಚಕ್ರವರ್ತಿಯದೊಂದು ಪತ್ರ ತಂದು ಮಹಮ್ಮದಶಹನಿಗೆ ತಲಪಿಸಿದನು. ಕೂಡಲೆ ಅವನು ಶಹಾಜಿಯನ್ನು ಸಾಧಾರಣ ಸೆರೆಯಲ್ಲಿಟ್ಟನು. ಮುಂದೆ ನಾಲ್ಕು ವರ್ಷಕ್ಕೆ ದಕ್ಷಿಣಕರ್ನಾಟಕದಲ್ಲಿ ಆದ ದೊಡ್ಡ ದಾಳಿಯನ್ನು ಮುರಿಯಲಿಕ್ಕೆ ಬಾದಶಹನು ನಿರ್ವಾಹವಿಲ್ಲದೆ

ಮತ್ತೊ ಶಹಾಜಿಯನ್ನೇ ಕಳಿಸಿದನು. ಇತ್ತ ದಿನದಿನಕ್ಕೆ ಶಿವಾಜಿಯು ತನ್ನ ರಾಜ್ಯವನ್ನು ಬೆಳಿಸುತ್ತ ನಡೆದನು. ಇ. ಸ. ೧೬೫೬ರ ಸುಮಾರಿಗೆ ಮುಹಮ್ಮದ ಶಹನೂ ಶಹಾಜಿಯೂ ತೀರಿದರು.

ಮುಹಮ್ಮದಶಹನ ತರುವಾಯ ೨ನೇ ಅಲ್ಲೀ ಆದಿಲಶಹನು ಚಿಕ್ಕವನಿದ್ದ ಕಾರಣ ದರಬಾರದಲ್ಲಿ ಅಧಿಕಾರದ ಸಲುವಾಗಿ ವ್ಯಾಜ್ಯಗಳು ನಡೆದವು.



ಕುದುರೆಯ ಮೇಲೆ ಸವಾರಿಯಾದ ಶಿವಾಜಿಯು.

ಈ ಸಂಧಿ ನೋಡಿ ದಿಲ್ಲಿಯ ಚಕವರ್ತಿಯಾದ ಶಹಾಜಹಾನನ ಮಗ ಔರಂಗಜೇಬನು ದಂಡಿನೊಡನೆ ಬಂದು ವಿಜಾಪುರಕ್ಕೆ ಮುತ್ತಿಗೆ ಹಾಕಿ, ತನ್ನ

ತಂದೆಯ ಜಡ್ಡಿನ ಸುದ್ದಿ ಬಂದದ್ದರಿಂದ ಒಡಂಬಡಿಕೆ ಮಾಡಿಕೊಂಡು ಹೋದನು. ಇತ್ತಕಡೆ ಶಿವಾಜಿಯು ತನ್ನ ಕ್ರಮವನ್ನು ಯಥಾಪ್ರಕಾರ ನಡಿಸಿದ್ದನು. ಅವನು ಇ. ಸ. ೧೬೭೩ರಲ್ಲಿ ಹುಬ್ಬಳ್ಳಿಯನ್ನು ಸುಲಿದು, ಅಪಾರದ್ರವ್ಯ ಸಂಪಾದಿಸಿದ್ದನು. ಮುಂದಿನ ವರ್ಷ ಅವನು ಸಮಾರಂಭದಿಂದ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು ಮಹಾ ರಾಜಾಧಿರಾಜನೆಂಬ ಬಿರುದು ಧರಿಸಿ, ಟಂಕಶಾಲೆ ಹಾಕಿಸಿ, ತನ್ನ ಹೆಸರಿನ ನಾಣ್ಯವನ್ನು ಮುದ್ರಿಸಿದನು (೧೬೭೪). ಮುಂದೆ ನಾಲ್ಕು ವರ್ಷವಾದ ಬಳಿಕ ಅಲ್ಲೀ ಆದಿಲಶಹನು ಶಿವಾಜಿಗೆ ವರ್ಷಕ್ಕೆ ೩ ಲಕ್ಷ ರೂಪಾಯಿ ಕಪ್ಪ ಕೊಡಲೊಡಂಬಟ್ಟನು. ಬಳಿಕ ಶಿವಾಜಿಯು ದೊಡ್ಡ ದಂಡಿನೊಡನೆ ಕರ್ನಾಟಕಕ್ಕೆ ಹೋಗಿ, ತನ್ನ ಮಲತಮ್ಮನಾದ **ವೆಂಕೋಜಿಯ** ಕೈಯಿಂದ ತಂದೆಯ ಜಹಗೀರಿನಲ್ಲಿ ಪಾಲು ತಕ್ಕೊಂಡು, **ಜಿಂಜೀ, ವೆಲ್ಲೂರ, ಕೊಪ್ಪಳ** ಮುಂತಾದ ಕೋಟೆಗಳನ್ನು ತಕ್ಕೊಂಡು, ಈ ಸೀಮೆಯ ರಕ್ಷಣೆಗಾಗಿ ತಕ್ಕಷ್ಟು ದಂಡನ್ನು ಇಟ್ಟು ಮರಳಿ ಬಂದನು. ಆ ಬಳಿಕ ಅವನು ಬಹಳ ದಿವಸ ಬದುಕಿರಲಿಲ್ಲ; ಇ. ಸ. ೧೬೮೦ರಲ್ಲಿ ಕಾಲಿಗೆ ಬಾವು ಬಂದು ರಾಜಗಡದಲ್ಲಿ ಮರಣ ಹೊಂದಿದನು. ಶಿವಾಜಿಯು ಶೂರನೂ ಚತುರನೂ ಯುಕ್ತಿವಂತನೂ ಕಾರಭಾರದಲ್ಲಿ ದಕ್ಷನೂ ಇದ್ದನು. ಇವನು ಸಾಧಾರಣ ಮನುಷ್ಯನಲ್ಲ. ಹೊಸ ರಾಜ್ಯಸ್ಥಾಪಕರಾದ ಮಹಾಪುರುಷರಲ್ಲಿ ಈತನನ್ನು ಎಣಿಸತಕ್ಕದ್ದು.

**ಶಿವಾಜಿಯ ಪಟ್ಟಾಭಿಷೇಕ.**

ವಿಜಾಪುರದಲ್ಲಿ ಅಲ್ಲೀ ಆದಿಲಶಹನು ಇ. ಸ. ೧೬೭೨ರ ವರೆಗೆ ಆಳಿದ ಬಳಿಕ ಅವನ ೫ ವರುಷದ ಮಗನಾದ **ಶಿಕಂದರನು** ಪಟ್ಟಕ್ಕೆ ಕುಳಿತನು. ಕರೀಮಖಾನನೆಂಬವನು ಇವನ ವಜೀರನಾಗಿದ್ದನು. ದಿಲ್ಲಿಯ ಚಕ್ರವರ್ತಿಯಾದ ಔರಂಗಜೇಬನಿಗೆ ಅಲ್ಲೀಶಹನು ಸೊಲ್ಲಾಪುರದ ಸೀಮೆಯನ್ನು ಕೊಟ್ಟಿದ್ದರೂ ಅವನಿಗೆ ಸಮಾಧಾನವಾಗಿರಲಿಲ್ಲ. ಔರಂಗಜೇಬನು ಬಹಳ ರಾಜ್ಯಲೋಭಿಯು. ಯಾವತ್ತು ಹಿಂದುಸ್ಥಾನವನ್ನು ತಾನೊಬ್ಬನೇ ಆಳಬೇಕೆಂಬ ಕಾಂಕ್ಷೆ ಅವನಿಗೆ ಬಹಳವಿತ್ತು. ಆ ಪ್ರಕಾರ ಅವನು ಉತ್ತರ ಹಿಂದುಸ್ಥಾನವನ್ನೆಲ್ಲ ಮೊದಲು ಆಕ್ರಮಿಸಿಕೊಂಡು, ದಕ್ಷಿಣಕ್ಕೆ ತನ್ನ ಸರದಾರರನ್ನು ಕಳುಹಿದನು. ಶಿವಾಜೀ ಮಹಾರಾಜನು ಬದುಕಿರುವ ವರೆಗೆ ದಕ್ಷಿಣದೇಶಗಳಲ್ಲಿ ಮೊಗಲರ

**ಔರಂಗಜೇಬನ ರಾಜ್ಯಲೋಭ.**

ಕಾಟ ಸಾಗಲಿಲ್ಲ. ಮುಂದೆ ಶಿವಾಜಿಯ ಕಾಲದ ಕಲಿತನವು ಮಹಾರಾಷ್ಟ್ರರಲ್ಲಿ ಉಳಿಯಲಿಲ್ಲ. ಶಿವಾಜಿಯ ಹಿಂದೆ ಅವನ ಹಿರಿ ಮಗ ಸಂಭಾಜಿಯು ಪಟ್ಟವೇರಿದನು. ಇವನು ತಂದೆಯಂತೆ ಶೂರನಿದ್ದಾಗ್ಯೂ ಅವಿವೇಕಿಯೂ

**ಸಂಭಾಜಿಯ ದುರ್ವ್ಯವಸ್ಥೆ.**

ಕ್ರೂರನೂ ಇದ್ದನು; ಕಲುಷನೆಂಬ ಕನೋಜೀ ಬ್ರಾಹ್ಮಣನ ಸಹವಾಸದಿಂದ ಕೆಟ್ಟು ದುರ್ವ್ಯಸನಕ್ಕೆ ಬಿದ್ದು, ತನ್ನ ತಂದೆಯ ಕಾಲದ ಎಷ್ಟೋ ಮಂತ್ರಿಗಳನ್ನು ಕೊಲ್ಲಿಸಿದನು; ತಂದೆ ಕೂಡಹಾಕಿಟ್ಟ ದ್ರವ್ಯವನ್ನೆಲ್ಲಾ ಹಾಳುಮಾಡಿಬಿಟ್ಟನು. ವಿಜಾಪುರ ಗೋವಳಕೊಂಡ ರಾಜ್ಯಗಳಂತೂ ತೀರ ದುಃಸ್ಥಿತಿಯಲ್ಲಿದ್ದವು. ಅದಕ್ಕೆ ಔರಂಗಜೇಬನು ಈ ಸಂಧಿ ಸಾಧಿಸಿ ದೊಡ್ಡ ದಂಡಿನೊಡನೆ ಬಂದು ವಿಜಾಪುರವನ್ನು ಮುತ್ತಿದನು. ಅದರ ಹಿಂದಿನ ವರ್ಷ ಅವನ ಮಗನಾಗಿ **ಸುಲ್ತಾನ ಮೋ ಅಜೀಮನು ಗೋಕಾವಿ, ಧಾರವಾಡ, ಹುಬ್ಬಳ್ಳಿ** ಮುಂತಾದ ಪ್ರಾಂತಗಳನ್ನು ತಕ್ಕೊಂಡಿದ್ದನು (೧೬೮೬). ತರುವಾಯ ಔರಂಗಜೇಬನು **ಶಿಕಂದರಶಹನನ್ನು** ಒಯಿದು

**ಆದಿಲಶಾಹಿಯ ಅಂತ.**

**ಗ್ವಾಲ್ಹೇರದ** ಕೋಟೆಯಲ್ಲಿಟ್ಟನು. ಇಲ್ಲಿಗೆ ಆದಿಲಶಾಹೀ ರಾಜ್ಯವು ಮುಗಿಯಿತು. ಈ ರಾಜ್ಯವು ಸುಮಾರು ೩೦೦ ವರ್ಷಗಳ ವರೆಗೆ ಗೌರವದಿಂದಲೂ ವೈಭವದಿಂದಲೂ ಸಾಗಿತು. ಬಳಿಕ ಗೋವಳಕೊಂಡದ ಬಾದಶಹನು ಹಿಂದೂಜನರ ಪ್ರತಿಷ್ಠೆ ಬೆಳಿಸಿದನೆಂದು ನೆವ ತೆಗೆದು ಔರಂಗಜೇಬನು ಗೋವಳಕೊಂಡವನ್ನು ಮುತ್ತಿದನು.

**ಗೋವಳ ಕೊಂಡದ ಅಂತ.**

ಆಗ ಅಲ್ಲಿಯ ಬಾದಶಹನಾದ **ಅಬೂ ಹುಸೇನನು** ಔರಂಗಜೇಬನನ್ನು ಸಂತೋಷಪಡಿಸಲಿಕ್ಕಾಗಿ ತನ್ನ ರಾಣಿಯು ಮೈಮೇಲಿನ ಆಭರಣಗಳನ್ನು ಸಹ ಅವನಿಗೆ ಕೊಟ್ಟನು. ಆದರೆ ಅದರಿಂದ ಆ ಪಿಶಾಚಿಯ ತೃಪ್ತಿಯಾಗಲಿಲ್ಲ. ಔರಂಗಜೇಬನು ಅಬೂ ಹುಸೇನನನ್ನು **ಅಹಮ್ಮದನಗರದ** ಕೋಟೆಕಾಣಿಸಿದನು. ಈ ಮೇರೆಗೆ ಔರಂಗಜೇಬನು ದಕ್ಷಿಣದ ಎರಡು ಮುಸಲ್ಮಾನ ರಾಜ್ಯಗಳನ್ನು ಮುರಿದು ತನ್ನ ಅಧಿಕಾರವನ್ನು ಕರ್ನಾಟಕದಲ್ಲಿ ಸ್ಥಾಪಿಸಿದನು; ತರುವಾಯ ಮಹಾರಾಷ್ಟ್ರರನ್ನು ನಿರ್ಮೂಲ ಮಾಡುವ ಬಗ್ಗೆ ಆಲೋಚನೆ ಮಾಡಿದನು. ಆದರೆ ದಕ್ಷಿಣದ ಎರಡು ಮುಸಲ್ಮಾನ ರಾಜ್ಯಗಳನ್ನು ಮುರಿದದ್ದರಿಂದ, ಮಹಾರಾಷ್ಟ್ರರಿಗೆ ಔರಂಗಜೇಬನು ತಾನಾಗಿ ಬಲ ಕೊಟ್ಟ ಹಾಗಾಯಿತು. ವಿಜಾಪುರ ಗೋವಳಕೊಂಡಗಳಿಗೆ ಸೇರಿದ ಸುಮಾರು ೨ ಲಕ್ಷ ದಂಡಾಳುಗಳು ತೆರವಾಗಿ ಕೊಲೆ

ಸುಲಿಗೆಕಡಿದಾಟಗಳನ್ನು ನಡಿಸಿದರು. ರೈತರು ಬಹಳ ಗೋಳಾಡಿದರು. ವ್ಯಾಪಾರೋದ್ಯೋಗಗಳು ಕಟ್ಟಾದವು. ಈ ಭಯಂಕರ ಸ್ಥಿತಿಯು ೨೦ ವರ್ಷಗಳ ವರೆಗೆ ನಡೆಯಿತು. ಔರಂಗಜೇಬನು ಮಹಾರಾಷ್ಟ್ರರ ಕೋಟೆಗಳನ್ನು ತಕ್ಕೊಳ್ಳಲಿಕ್ಕೆ ದಂಡು ಕಳಿಸಿದ ಸುಮಾರಿಗೆ, ಒಬ್ಬ ಮುಸಲ್ಮಾನ ಸರದಾರನು ಕಪಟದಿಂದ ಸಂಭಾಜಿಯನ್ನೂ ಕಲುಷನನ್ನೂ ಹಿಡಿದು ತುಳಾಪುರದಲ್ಲಿ ಔರಂಗಜೇಬನ ಬಳಿಗೆ ತಂದನು. ಔರಂಗಜೇಬನು ಸಂಭಾಜಿಗೆ ಮುಸಲ್ಮಾನನಾಗಲು ಹೇಳಲು ಸಂಭಾಜಿಯು ಅದನ್ನು ಧಿಕ್ಕರಿಸಿದನು. ಆಗ ಔರಂಗಜೇಬನು ಅವನನ್ನು ಕ್ರೂರತನದಿಂದ ಕೊಲ್ಲಿಸಿದನು. ಬಳಿಕ ಬಾದಶಹನು ಸಂಭಾಜಿಯ ಹೆಂಡತಿಯನ್ನೂ ಅವನ ಮಗನನ್ನೂ ಸೆರೆ ಹಿಡಿದು ದಿಲ್ಲಿಗೆ ಒಯ್ದನು. ಈ ಹುಡುಗನಿಗೆ ಔರಂಗಜೇಬನು ಪ್ರೀತಿಯಿಂದ **ಶಾಹೂ** (ಸಂಭಾವಿತ) ಎಂಬ ಹೆಸರಿಟ್ಟು, ದೊಡ್ಡವನಾಗುವ ವರೆಗೆ ತನ್ನ ಬಳಿಯಲ್ಲಿಟ್ಟುಕೊಂಡನು.

**ಸಂಭಾಜಿಯ ಕೊಲೆ.**

ಇತ್ತ ಸಂಭಾಜಿಯ ತಮ್ಮನಾದ ರಾಜಾರಾಮನು ಪಟ್ಟವೇರಿದನು. ಅವನು ಚತುರರಾದ ಮಂತ್ರಿಗಳ ಸಹಾಯದಿಂದ ಸಂಭಾಜಿಯ ಅವ್ಯವಸ್ಥೆಗಳನ್ನೆಲ್ಲ ಮುರಿದು ತನ್ನ ರಾಜ್ಯವನ್ನು ಪುನಃ ರೂಪಕ್ಕೆ ತಂದನು; ವಿಜಾಪುರದ ಉತ್ತರಕರ್ನಾಟಕ ಸಹಿತ ಮಹಾರಾಷ್ಟ್ರ ದೇಶವನ್ನೆಲ್ಲ ಪೂರ್ಣವಾಗಿ ವಶಮಾಡಿಕೊಂಡನು. **ಧನಾಜಿ ಜಾಧವ, ಸಂತಾಜಿ ಘೋರಪಡೆ** ಎಂಬ ಇಬ್ಬರು ಶೂರ ಸರದಾರರು ಅವನ ಬಳಿಯಲ್ಲಿದ್ದರು. ಅವರು ದಿಲ್ಲಿಯ ಸರದಾರರನ್ನು ಹಲವು ಸಾರೆ ಗೆದ್ದು, ಅವರ ರಾಜ್ಯದಲ್ಲಿ ಕೊಲೆಸುಲಿಗೆಗಳನ್ನು ಮಾಡಿದರು.

**ರಾಜಾರಾಮನ ಸುರಾಜ್ಯ.**

ಔರಂಗಜೇಬನು ದಕ್ಷಿಣದಲ್ಲಿ ತನ್ನ ಕೈಸೇರಿದ ಯಾವತ್ತು ಪ್ರಾಂತಗಳನ್ನು ವಿಭಾಗಿಸಿ ಮೂರು ಸುಭೆಗಳನ್ನು ಮಾಡಿದನು. ೧. ಹೈದರಾಬಾದ, ೨. ಬೇದರ, ೩. ವಿಜಾಪುರ. ಹೈದರಾಬಾದದ ಸುಭೆಯಲ್ಲಿ ತೆಲಗು ಸೀಮೆ ಬಹಳ; ಕನ್ನಡ ನಾಡು ಸ್ವಲ್ಪವಿತ್ತು. ಬೇದರದ ಸುಭೆಯಲ್ಲಿ ಬೇದರ, ಕಲಬುರ್ಗಿ, ಸಾಗರ, ಮಳಖೇಡ, ರಾಯಚೂರು ಎಂಬ ೫ ಕರ್ನಾಟಕ ಪ್ರಾಂತಗಳಿದ್ದವು. ವಿಜಾಪುರದ ಸುಭೆಯಲ್ಲಿ ಪುಣೆ, ಕೊಂಕಣ, ವಿಜಾಪುರ, ಕೊಲ್ಲಾಪುರ, ಸವಣೂರು, ಬಂಕಾಪುರ, ಆದವಾನಿ, ನಂದಿಹಾಳ ಎಂಬ ೮ ಪ್ರಾಂತಗಳಿದ್ದವು. ಈ ವಿಭಾಗಗಳು

**ಔರಂಗಜೇಬನ ದಕ್ಷಿಣದ ರಾಜ್ಯ.**

ಹೆಸರಿಗೆ ಮಾತ್ರ, ಎಷ್ಟೋ ಪ್ರಾಂತಗಳು ಮೊಗಲರಿಗೆ ಮೊದಲಿನಿಂದ ವಶವಾಗಿದ್ದಿಲ್ಲ. ಮುಂದೆ ಸಂಭಾಜಿಯು ಕೆಲವನ್ನು ಗೆದ್ದುಕೊಂಡನು.

೧೭೦೦-೧೭೦೭.

ರಾಜಾರಾಮನು ೧೭೦೦ರಲ್ಲಿ ತೀರಿದ ಬಳಿಕ ಅವನ ಮಗ ಮತ್ತೊಬ್ಬ ಶಿವಾಜಿಯು ರಾಯಗಡದಲ್ಲಿ ಪಟ್ಟವೇರಿದನು. ಇದೇ ಸಂಧಿಗೆ ಸವಣೂರ ನಬಾಬ, ಕಿತ್ತೂರ ದೇಸಾಯಿ, ಒಂಟಮುರಿ ದೇಸಾಯಿ ಮುಂತಾದವರು ಸ್ವತಂತ್ರರಾದರು. ಸವಣೂರ ನಬಾಬರ ಮೂಲಪುರುಷನಾದ ಕರೀಮಖಾನನು ವಿಜಾಪುರದ ಶಿಕಂದರನ ವಜೀರನಿದ್ದಾಗ ಬಂಕಾಪುರ ಪ್ರಾಂತವು ಆತನ ವಶದಲ್ಲಿತ್ತು. ವಿಜಾಪುರದ ರಾಜ್ಯವು ಮುರಿದನಂತರ ಅವನ ಮಗನಾದ ಕಾಫಖಾನನು ಔರಂಗಜೇಬನ

**ಸವಣೂರು ಸಂಸ್ಥಾನದ ಆರಂಭ.**

ದರಬಾರಿನಲ್ಲಿ ಪ್ರಸಿದ್ಧಿಗೆ ಬಂದು ದಲೇರಖಾನ ಬಹಾದ್ದೂರ ಎಂಬ ಪದವಿ ಪಡೆದು ಸವಣೂರು, ಬಂಕಾಪುರ, ಬೆಳಗಾವಿ, ತೊರಗಲ್ಲು ಮುಂತಾದ ೨೨ ಮಹಲುಗಳ ಜಹಗೀರು ಪಡೆದನು. ತರುವಾಯ ಸ್ವಲ್ಪ ದಿವಸಗಳೊಳಗೆ ಕಿತ್ತೂರ, ನವಲಗುಂದ, ಶಿರಹಟ್ಟಿ, ಡಂಬಳ ಪರಗಣೆಗಳ ದೇಸಾಯಿಗಳು ಎಬ್ಬಿಸಿದ ದಾಳಿಗಳನ್ನು ಮುರಿದು ಅವರೆಲ್ಲರಿಗೊಡೆಯನಾದನು. ಇದೇ ಸವಣೂರು ಸಂಸ್ಥಾನದ ಆರಂಭವು (೧೬೯೦). ಇ. ಸ. ೧೭೦೭ರಲ್ಲಿ ಔರಂಗ

**ಔರಂಗಜೇಬನ ಮರಣ.**

ಜೇಬನು ತೀರಿದ ಬಳಿಕ ಶಾಹೂನು ಸ್ವದೇಶಕ್ಕೆ ಬಂದು ರಾಜಾರಾಮನ ಮಗನಾದ ಶಿವಾಜಿಯನ್ನು ಸೋಲಿಸಿ, ಸಾತಾರೆಯಲ್ಲಿ ರಾಜ್ಯಾಭಿಷೇಕ ಮಾಡಿಸಿಕೊಂಡನು.

ಈ ಅವಧಿಯಲ್ಲಿ ದುರ್ಬಲರಾದ ವಿಜಾಪುರ ಗೋವಳಕೊಂಡಗಳ ಅರಸರು ಮಹಾರಾಷ್ಟ್ರರನ್ನೂ ಮೊಗಲರನ್ನೂ ಸಮಾಧಾನ ಪಡಿಸುವದರಲ್ಲಿ ತೊಡಗಿದ್ದರಿಂದ ಮೈಸೂರಿನ ಒಡೆಯರು ಸಂಧಿ ಸಾಧಿಸಿ ಪ್ರಬಲರಾಗುತ್ತಿದ್ದರು.

**ಮೈಸೂರು ೧೬೩೮.**

೧೬೩೮ರಲ್ಲಿ ಕಂಠೀರವ ನರಸರಾಜನು ಮೈಸೂರಿನಲ್ಲಿ ಆಳಹತ್ತಿದನು. ಕೆಲವು ಒಡೆಯರು ಆಗ ಕಲಹವೆಬ್ಬಿಸಿ ವಿಜಾಪುರದ ಸಹಾಯ ಬೇಡಲು, ರಣದುಲ್ಲಾಖಾನನೆಂಬ ಸರದಾರನು ೪೦,೦೦೦ ದಂಡಿನೊಡನೆ ಬಂದು ಶ್ರೀರಂಗಪಟ್ಟಣವನ್ನೂ ಮೈಸೂರವನ್ನೂ ಮುತ್ತಿದನು. ಆದರೆ ಖಾನನಿಗೆ ಕೋಟೆಯನ್ನು ಒಳಸೇರುವದಾಗಲಿಲ್ಲ. ಇವನು ಕಂಠೀರವ ನರಸನೊಡನೆ ಒಪ್ಪಂದ ಮಾಡಿಕೊಂಡು ಹೋದನು.

ಕಂಠೀರವ ನರಸನು ಶೂರನೂ ವಿಚಾರಿಯೂ ಇದ್ದನು. ದಳವಾಯಿಯ ಕೈಯಲ್ಲಿ ಅಧಿಕಾರವಿರಬಾರದೆಂದು ಈ ಅಧಿಕಾರಿಯನ್ನು ಮೇಲಿಂದ ಮೇಲೆ ಬದಲಿಸಿದನು. ಯುದ್ಧಗಳನ್ನು ದಳವಾಯಿಗೆ ಒಪ್ಪಿಸದೆ ತಾನೇ ಕಾಳಗಕ್ಕೆ ಹೊರಡುತ್ತಿದ್ದನು. ರಾಜ್ಯದಲ್ಲಿ ಸಣ್ಣ ದೊಡ್ಡ ಒಡೆಯರು ತಮ್ಮ ನಾಣ್ಯಗಳನ್ನು ಮುದ್ರಿಸುತ್ತಿದ್ದರು. ಇವನು ಒಂದು ದೊಡ್ಡ ಟಂಕಶಾಲೆ ಹಾಕಿಸಿ, ತನ್ನ ಹೆಸರಿನಿಂದಲೇ ಎಲ್ಲ ನಾಣ್ಯಗಳನ್ನು ಮುದ್ರಿಸಿ, ಒಡೆಯರ ಮೇಲಿರುವ ಅಧಿಕಾರವನ್ನು ತೋರಿಸಿದನು. ಪೆನುಕೊಂಡದೊಳಗೆ ಹೆಸರಿಗೆ ಅರಸನಾಗಿದ್ದ ವಿಜಯನಗರದ ವಂಶದ ರಂಗರಾಯನ ಒಡೆತನವನ್ನು ಒಪ್ಪಿಕೊಳ್ಳದೆ ಇ. ಸ. ೧೬೪೬ರಲ್ಲಿ ತನ್ನ ಹೆಸರಿನಿಂದ ಶಿಲಾಲೇಖಗಳನ್ನು ಕೆತ್ತಿಸಹತ್ತಿದನು. ರಾಜ್ಯದೊಳಗಿನ ಭೂಮಿಗಳನ್ನೆಲ್ಲ ಅಳೆಸಿ ಕಂದಾಯ ಕಟ್ಟಿ, ಹಣ ಕೂಡಹಾಕಿ, ಸೊಕ್ಕಿದ ರೈತರ ಹೆಚ್ಚಿನ ಹಣವನ್ನೆಲ್ಲ ತೆಗೆದುಕೊಂಡು ಅವರನ್ನು ಅಂಕಿತದಲ್ಲಿಟ್ಟುಕೊಂಡನು. ಈ ಹಣದಿಂದ ಶ್ರೀರಂಗಪಟ್ಟಣ ಮೈಸೂರು ಈ ಕೋಟೆಗಳನ್ನು ದುರಸ್ತು ಮಾಡಿಸಿ ಭದ್ರಪಡಿಸಿದನು; ಕಾವೇರಿಗೆ ಒಡ್ಡು ಹಾಕಿಸಿ ಶ್ರೀರಂಗಪಟ್ಟಣದೊಳಗೆ ನೀರು ತಂದನು; ಅಲ್ಲಿಯ ಪ್ರಸಿದ್ಧ ದೇವಾಲಯಗಳಿಗೆ ಜಹಗೀರು ಹಾಕಿ ಕೊಟ್ಟನು. ಇವನು ಪಶ್ಚಿಮದ ಕೊಡಗು ಪ್ರಾಂತವನ್ನೂ ಉತ್ತರದಲ್ಲಿ ಇಕ್ಕೇರಿ ಚಿತ್ರದುರ್ಗಗಳ ವರೆಗಿರುವ ಸೀಮೆಯನ್ನೂ ವಶಮಾಡಿಕೊಂಡನು. ಇ. ಸ. ೧೬೫೯ರಲ್ಲಿ ಇವನು ತೀರಿಕೊಂಡ ಬಳಿಕ ಪಟ್ಟವೇರಿದ ದೊಡ್ಡ ದೇವರಾಜ ಒಡೆಯನು ಶಾಂತತೆಯಿಂದ ೧೪ ವರ್ಷ ಆಳಿದನು. ಇವನು ದಾನಶೂರನಿದ್ದನು; ಬ್ರಾಹ್ಮಣರಿಗೋಸ್ಕರ ಅಗ್ರಹಾರಗಳನ್ನೂ ಪ್ರವಾಸಿಕರಿಗೋಸ್ಕರ ಅಲ್ಲಲ್ಲಿ ಧರ್ಮಶಾಲೆಗಳನ್ನೂ ಕಟ್ಟಿಸಿದನು; ಮೈಸೂರ ಕೆರೆಯನ್ನೂ ಇತರ ಕೆರೆಗಳನ್ನೂ ಕಡಿಸಿದನು. ಇ. ಸ. ೧೬೭೨ರಲ್ಲಿ ಚಿಕ್ಕದೇವರಾಜನು ಅರಸಾದನು. ಇವನು ಕಕ್ಕನ ಆಳಿಕೆಯಲ್ಲಿ ಯುವರಾಜನಿದ್ದಾಗ ಮಹಾರಾಷ್ಟ್ರರು, ವಿಜಾಪುರ ಗೋವಳಕೊಂಡಗಳ ಮುಸಲ್ಮಾನರು, ಇಕ್ಕೇರಿ ಮಧುರೆಯ ನಾಯಕರು ಇವರೆಲ್ಲರು ಕೂಡಿ ಮೈಸೂರಿನ ಮೇಲೆ ದಂಡೆತ್ತಿ ಬಂದಾಗ ಸಂಯುಕ್ತ ಸೇನೆಯನ್ನು ಚದರಿಸಿ ಹೆಸರಾಗಿದ್ದನು; ಉತ್ತರದಲ್ಲಿ ಮುಸಲ್ಮಾನರೂ ಮಹಾರಾಷ್ಟ್ರರೂ ಮೊಗಲರೂ ಒಡೆತನಕ್ಕೆ ಬಡಿದಾಡುತ್ತಿದ್ದದ್ದನ್ನು

**ಸ್ವತಂತ್ರ ಮೈಸೂರು.**

**ಚಿಕ್ಕ ದೇವರಾಜನ ಶೌರ್ಯ.**

ನೋಡಿ, ಸಂಧಿ ಸಾಧಿಸಿ, ತನ್ನ ಹಿಂದಿನವರು ಗೆದ್ದ ಪ್ರಾಂತಗಳನ್ನು ವ್ಯವಸ್ಥೆಗೊಳಿಸಿ ಕೈಬಿಟ್ಟ ಸೀಮೆಗಳನ್ನು ತಿರುಗಿ ಗೆದ್ದು, ರಾಜ್ಯವನ್ನು ಬಲಪಡಿಸಿದನು; ಉತ್ತರದಲ್ಲಿ ತುಮಕೂರದ ವರೆಗೂ, ದಕ್ಷಿಣದಲ್ಲಿ **ತ್ರಿಚನಾಪಳ್ಳಿಯ** ವರೆಗೂ ಮೈಸೂರ ಪ್ರಾಂತವನ್ನು ಹಬ್ಬಿಸಿದನು. ಈತನು ಗೆಲವುಗಳಿಗಿಂತ ರಾಜ್ಯಸುಧಾರಣೆಗಳ ಬಗ್ಗೆ ಹೆಸರಾಗಿರುವನು. ಈತನ ಜೈನಗುರುವಾದ **ವಿಶಾಲಾಕ್ಷ ಪಂಡಿತನು** ಈ ಕೆಲಸದಲ್ಲಿ ಈತನಿಗೆ ಬಹಳ ನೆರವಾದನು. ಮೊದಲು ಇವನು ರಾಜ್ಯದೊಳಗಿನ ಕರಕಂದಾಯಗಳನ್ನು ಸಮಗೊಳಿಸಿದನು. ಇದಕ್ಕಾಗಿ ವಿಶಾಲಾಕ್ಷಪಂಡಿತನು ಕೊಲ್ಲಲ್ಪಟ್ಟನು. ಮೂಲೆಗೆ ಬಿದ್ದಿದ್ದ ಹಲವು ಹೊಸ ಸುಂಕಗಳನ್ನೂ ಕರಗಳನ್ನೂ ಕಟ್ಟಿ ಉತ್ಪನ್ನವನ್ನು ಬೆಳಿಸಿದನು. ರಾಜ್ಯದಲ್ಲಿ ೮೬ ಸಮಭಾಗಗಳನ್ನು ಮಾಡಿ ಸುಭೇದಾರರನ್ನು ನೇಮಿಸಿದನು. ಮೊಗಲ ರಾಜ್ಯಪದ್ಧತಿಯ ಮೇರೆಗೆ ರಾಜ್ಯವ್ಯವಸ್ಥೆಗೋಸ್ಕರ ೧೮ ಖಾತೆಗಳನ್ನು ಏರ್ಪಡಿಸಿದನು. ಇದೇ ಸದ್ಯದಲ್ಲಿ ಮೈಸೂರಿನಲ್ಲಿರುವ **ಅಠರಾ ಕಚೇರಿಯ** ಮೂಲವು. ಶಾಂತತೆಯಿದ್ದಾಗ ಪೋಲೀಸರ ಕೆಲಸ ಮಾಡಲಿಕ್ಕೂ ಯುದ್ಧ ನಡೆದರೆ ದಂಡಾಳುಗಳಾಗಲಿಕ್ಕೂ ಪ್ರತಿಯೊಂದು ಸುಭೆಯವರು ಇಂತಿಷ್ಟು ಜನರನ್ನು ಸಿದ್ಧವಿಡಬೇಕೆಂದು ಅಪ್ಪಣೆ ಮಾಡಿದನು. ರಾಜ್ಯದ ಆದಾಯವನ್ನು ವಸೂಲು ಮಾಡಲಿಕ್ಕೆ ಇವನು ವಿಲಕ್ಷಣವಾದ ಹಂಚಿಕೆ ಹಾಕಿದನು. ಪ್ರತಿ ದಿವಸ ಶ್ರೀರಂಗಪಟ್ಟಣದ ಖಜಾನೆಗೆ ೨೦೦೦ ಪಗೋಡಾ (೬೦೦೦ ರೂಪಾಯಿ) ಮುಟ್ಟಿದ ಹೊರತು ತಾನು ಊಟಕ್ಕೆ ಕೂಡುವದಿಲ್ಲೆಂದು ಕಟ್ಟಳೆ ಸಾರಿದನು. ಕೆಲವು ಪ್ರಮುಖ ಸ್ನೇಹಿತರ ಸಹಾಯದಿಂದ ಕಾರಭಾರ ನಡಿಸಿದ್ದರಿಂದ ದಳವಾಯಿಯ ಅಧಿಕಾರವು ಪ್ರಬಲವಾಗಲಿಲ್ಲ. ವಿಶಾಲಾಕ್ಷಪಂಡಿತನು ತೀರಿಕೊಂಡ ಬಳಿಕ ಚಿಕ್ಕಂದಿನಿಂದ ತನ್ನ ಗೆಳೆಯನಾದ **ತಿರುಮಲ ಅಯ್ಯಂಗಾರ** ಎಂಬಾತನನ್ನು ಮುಖ್ಯ ಮಂತ್ರಿಯಾಗಿ ನೇಮಿಸಿಕೊಂಡನು. ಈತನು ಹೆಸರಾದ ಕನ್ನಡ ಕವಿಯು. ಈ ಮೇರೆಗೆ ಮೈಸೂರ ಪ್ರಾಂತವನ್ನು ಘನತೆಗೇರಿಸಿ ರಾಜ್ಯಕ್ಕೆ ನಿಶ್ಚಿತಸ್ವರೂಪ ಕೊಟ್ಟು ಚಿಕ್ಕದೇವರಾಜ ಒಡೆಯನು ೧೭೦೪ರಲ್ಲಿ ತೀರಿಕೊಂಡನು. ಇವನ ತರುವಾಯ ಮೈಸೂರಿನ ಘನತೆಯು ಕಡಿಮೆಯಾಗ ಹತ್ತಿತು.

**ಚಿಕ್ಕ ದೇವರಾಜನ ಸುಧಾರಣೆಗಳು.**

---

## ೧೧ನೇ ಪ್ರಕರಣ.

## ಮಹಾರಾಷ್ಟ್ರರು, ಹೈದರ, ಟೀಪು, ಇಂಗ್ಲಿಷರು.

(೧೮ನೆಯ ಶತಮಾನ.)

ಔರಂಗಜೇಬನ ಮರಣದ ತರುವಾಯ ಕರ್ನಾಟಕದಲ್ಲಿ ಉತ್ತರದಲ್ಲಿ **ಮಹಾರಾಷ್ಟ್ರರೂ**, ಮೈಸೂರಿನಲ್ಲಿ **ಹೈದರನೂ** ಪ್ರಬಲರಾಗಲಿಕ್ಕೆ ಹೆಣಗಹತ್ತಿದರು. ಹಿಂದೆ ಈ ದೇಶಕ್ಕೆ ಬಂದಿದ್ದ ಪೋರ್ತುಗೀಜರ ಘನತೆಯನ್ನು ಕೇಳಿ ೧೦೦ ವರ್ಷಗಳ ಮೊದಲೇ ವ್ಯಾಪಾರಕ್ಕೆಂದು ಹಿಂದುಸ್ತಾನಕ್ಕೆ ಬಂದಿದ್ದ **ಇಂಗ್ಲಿಷರೂ ಫ್ರೆಂಚರೂ** ಹಿಂದುಸ್ತಾನದ ದಂಡೆಯ ಮೇಲೆ ವ್ಯಾಪಾರದ ಕೆಲವು ಸ್ಥಳಗಳನ್ನು ಹಿಡಿದುಕೊಂಡು, ತಮ್ಮತಮ್ಮೊಳಗೆ ಕಡಿದಾಡಿದ್ದಲ್ಲದೆ, ಕರ್ನಾಟಕದ ಅರಸರ ಜಗಳಗಳಲ್ಲಿ ಬಿದ್ದು, ತಮ್ಮ ಪ್ರತಿಷ್ಠೆಯನ್ನು ಬೆಳಿಸಲಿಕ್ಕೆ ಪ್ರಯತ್ನಿಸುತ್ತಿದ್ದರು. ಮಹಾರಾಷ್ಟ್ರರು ಮುಸಲ್ಮಾನರನ್ನು ಮುರಿ ಬಡಿದರು. ಇಂಗ್ಲಿಷರು ಹೈದರನ ಮಗನನ್ನು ಕಡೆಗಾಣಿಸಿದರು. ಕೊನೆಗೆ ಕನ್ನಡಿಗರ ಸುದೈವದಿಂದ ಇಂಗ್ಲಿಷರೇ ಕರ್ನಾಟಕದ ಒಡೆಯರಾದರು.



ನಿಜಾಮ ಉಲ್ಮುಲ್ಕ.

**ಬಾಳಾಜೀ ವಿಶ್ವನಾಥ ಪೇಶವೆ.**

ದಿಲ್ಲಿಯಲ್ಲಿ ಅಧಿಕಾರದ ಸಲುವಾಗಿ ಜಗಳಾಡುತ್ತಿದ್ದ ಔರಂಗಜೇಬನ ಸರದಾರರಲ್ಲಿ **ನಿಜಾಮ ಉಲ್ಮುಲ್ಕ** ನೆಂಬವನು ಹೈದರಾಬಾದದ ಸುಭೇದಾರನಾಗಿ ದಕ್ಷಿಣಕ್ಕೆ ಬಂದನು. ಆಗ ಸಾತಾರೆಯಲ್ಲಿ ಪಟ್ಟವೇರಿದ **ಶಾಹೂ** ರಾಜನು ಸೋಮಾರಿ ಇದ್ದನು. ಅವನು **ಬಾಳಾಜೀ** ವಿಶ್ವನಾಥನೆಂಬ ಕೊಂಕಣಸ್ಥ ಬ್ರಾಹ್ಮಣನಿಗೆ ಪೇಶವೆ (ಮುಖ್ಯ ಪ್ರಧಾನಿ) ಎಂಬ ಅಧಿಕಾರ ಕೊಟ್ಟು, ಯಾವತ್ತು ಕಾರಭಾರವನ್ನು ಅವನ ಸ್ವಾಧೀನ ಮಾಡಿದನು (೧೭೧೪). ಬಾಳಾಜಿಯು ಕೊಂಕಣದ ಶ್ರೀವರ್ಧನವೆಂಬ ಗ್ರಾಮದ ಶಾನಭೋಗನು. ಇವನೇ ಪುಣೆಯ ಪೇಶವೆಯರ ಮೂಲಪುರುಷನು. ಇವನು ಮೇಲಾದ ಕಲಿಯೂ ಉದ್ಯೋಗಿಯೂ. ಮೊಗಲರ ರಾಜ್ಯದೊಳಗೆ **ಚೌಥಾಯಿ** (ವಸೂಲಿನ ನಾಲ್ಕನೇ ಪಾಲು), **ಸರದೇಶಮುಖಿ** (ವಸೂಲಿನ ಹತ್ತನೇ ಪಾಲು) ಎಂಬ ಬಾಬುಗಳನ್ನು ಇವನು ಶಾಹೂ ರಾಜನಿಗೆ ಸಂಪಾದಿಸಿ

ಕೊಟ್ಟನು. ಬಾಳಾಜಿಯು ತೀರಿದ ಬಳಿಕ (೧೭೨೦) ಅವನ ಮಗ ಹಿರಿ ಬಾಜೀರಾಯನು ಪೇಶವೆಯಾದನು. ಇವನು ಶಾಹೂ ರಾಜನನ್ನು ಹೆಸರಿಗೆ ಮಾತ್ರ ಅರಸನನ್ನು ಮಾಡಿ, ಯಾವತ್ತು ಕಾರಭಾರವನ್ನು ಸ್ವತಂತ್ರದಿಂದ ನಡಿಸಿದನು; ಪುಣೆಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಇವನು ಬಹು ಪರಾಕ್ರಮಿಯೂ ಚತುರನೂ ಇದ್ದನು.

**ಪೇಶವೆಯು ಸ್ವತಂತ್ರನಾದದ್ದು.**



ಹಿರಿಬಾಜೀರಾಯನು.

ಇಷ್ಟರಲ್ಲಿ ಇತ್ತ ನಿಜಾಮ ಉಲ್ಮುಲ್ಕನು ಬೇದರದ ಸುಭೆಯನ್ನು ಸಹ ಆಕ್ರಮಿಸಿ ಸ್ವತಂತ್ರವಾಗಿ ಆಳಹತ್ತಿದನು (೧೭೨೪). ಇವನೇ ಈಗಿನ ಹೈದರಾಬಾದದ ನಿಜಾಮನ ಮೂಲ ಪುರುಷನು. ವಿಜಾಪುರದ ಸುಭೆಯು ಮೊದಲಿನಿಂದ ಮಹಾರಾಷ್ಟ್ರರ ಕೈಯಲ್ಲಿಯೇ ಇತ್ತು. ನಿಜಾಮನು ಈ ಬಗ್ಗೆ ಬಾಜೀರಾಯನ ಕೂಡ ಕದನ ತೆಗೆದನು. ಬಾಜೀರಾಯನು ನಾಲ್ಕು

**ಬಾಜೀರಾಯ ನಿಗೂ ನಿಜಾಮ ನಿಗೂ ಯುದ್ಧ.**

ಕಾಳಗಗಳಲ್ಲಿ ನಿಜಾಮನನ್ನು ಗೆದ್ದು ಬೀದರದ ಸುಭೆಯೊಳಗಿನ ಕೆಲವು ಪರಗಣೆಗಳನ್ನು ತಕ್ಕೊಂಡನು. ಮುಂದೆ **ನಾನಾಸಾಹೇಬನು** (ಬಾಳಾಜೀ ಬಾಜೀರಾವ) ಪೇಶವೆಯಾದನು (೧೭೪೦). ಇವನು ಸವಣೂರ ನಬಾಬನ ದಾಳಿಗಳನ್ನು ಮುರಿದು, ೨೨ ಪರಗಣೆಗಳನ್ನು ಮಾತ್ರ ಅವನ ಕೈಯಲ್ಲಿಟ್ಟು, ಹೆಚ್ಚಿನ ರಾಜ್ಯವನ್ನೆಲ್ಲ ಕಸಕೊಂಡನು. ಶಾಹೂ ರಾಜನು ೧೭೪೮ರಲ್ಲಿ ಸಂತತಿ ಇಲ್ಲದೆ ತೀರಲು (ಇದೇ ವರ್ಷ ನಿಜಾಮ ಉಲ್ಮುಲ್ಕನೂ ತೀರಿದನು) ನಾನಾ ಸಾಹೇಬನು ಕೊಲ್ಲಾಪುರದಲ್ಲಿ ಆಳುತ್ತಿದ್ದ ರಾಜಾರಾಮನ ಮೊಮ್ಮಗನಾದ **ರಾಜಾರಾಮನನ್ನು** ಸಾತಾರೆಯಲ್ಲಿ ಹೆಸರಿಗೆ ಅರಸನನ್ನು ಮಾಡಿ ಕೂಡ್ರಿಸಿ, ಪುಣೆಯಲ್ಲಿ ತಾನು ಸ್ವತಂತ್ರನಾಗಿ ಅರಸನಂತೆ ಆಳಹತ್ತಿದನು.

ಮೈಸೂರಿನಲ್ಲಿ ಇ. ಸ. ೧೭೦೪ರಲ್ಲಿ ಪಟ್ಟಕ್ಕೆ ಬಂದ ಕಂಠೀರವರಾಜನು ಮೂಕನಿದ್ದನು. ಆದ್ದರಿಂದ ದಳವಾಯಿಯ ಕೈಯಲ್ಲಿ ಅಧಿಕಾರವು ಕೂಡಿಬಿತ್ತು. ಇವನು ಪ್ರಬಲನಾಗಹತ್ತಿದನು. ೧೭೧೪ರಲ್ಲಿ ಪಟ್ಟವೇರಿದ **ಕೃಷ್ಣರಾಜನು** ಅವ್ಯವಸ್ಥಿತನೂ ವಿಷಯಾಸಕ್ತನೂ ಇದ್ದದರಿಂದ ದೇವರಾಯನೆಂಬ ದಳ

**ಮೈಸೂರಿನಲ್ಲಿ ದಳವಾಯಿಗಳ ಪ್ರಾಬಲ್ಯ.**

ವಾಯಿಯು ಎಲ್ಲ ದೊಡ್ಡ ಅಧಿಕಾರಗಳನ್ನು ತನ್ನ ಆಪ್ತೇಷ್ಟರಿಗೆ ಕೊಟ್ಟು ಕಾರಭಾರ ನಡಿಸಿದನು. ಆಗ ಮೈಸೂರ ಪ್ರಾಂತದ ಸುತ್ತಲು ಇದ್ದ **ಪೈನಘಾಟ, ಪಾಲಘಾಟಗಳ** ನಬಾಬರೂ, **ಕೂರ್ಪಾ, ಕರ್ನೂಲ** ಮೊದಲಾದ ಸೀಮೆಗಳ ನವಾಬರೂ ಗುತ್ತಿಯ ಮಹಾರಾಷ್ಟ್ರ ಸರದಾರನೂ ಕೂಡಿ ಶ್ರೀರಂಗ ಪಟ್ಟಣವನ್ನು ಮುತ್ತಿದರು. ಕೃಷ್ಣರಾಜನು ಇವರೆಲ್ಲರಿಗೆ ಕೂಡಿ ೭೨ ಲಕ್ಷ ರೂಪಾಯಿ ಕೊಟ್ಟದ್ದಲ್ಲದೆ ಒಪ್ಪಂದ ಮಾಡಿಸಿಕೊಟ್ಟದ್ದಕ್ಕಾಗಿ ಪೈನಘಾಟದ ನಬಾಬನಿಗೆ ೨೮ ಲಕ್ಷ ರೂಪಾಯಿ ಕೊಟ್ಟನು, ಇದನ್ನು ಕೇಳಿ ನಾನಾಸಾಹೇಬನು ಮೈಸೂರಿನ ಮೇಲೆ ದಂಡೆತ್ತಿ ಹೋಗಲು ಕೃಷ್ಣರಾಯನು ಹಣವನ್ನು ಸುರಿದು ಇವನನ್ನೂ ಹಿಂದೆ ಕಳಿಸಿದನು. ದೊಡ್ಡ ಕೃಷ್ಣರಾಜನ ತರುವಾಯ (೧೭೩೧) ದೇವರಾಜನು, ರಾಜ್ಯಕ್ಕೆ ಬಾಧ್ಯಸ್ಥನಲ್ಲದಂಥ **ಚಾಮರಾಜನೆಂಬವ**

**ದೇವರಾಜ ದಳವಾಯಿ.**

ನನ್ನು ತಾನು ಹೇಳಿದಂತೆ ನಡೆಯುವದಕ್ಕೆ ಒಡಂಬಡಿಸಿ, ಪಟ್ಟಕ್ಕೆ ಕೂಡ್ರಿಸಿದನು. ಆದರೆ ಚಾಮರಾಜನು ಚತುರನಿದ್ದನು. ಅವನು ಯುಕ್ತಿಯಿಂದ ದೇವರಾಜನನ್ನೂ ಅವನ ತಮ್ಮನನ್ನೂ ಹಿಡಿದು ಸೆರೆಯಲ್ಲಿಡಿಸಿ, ಹೊಸ ಮಂತ್ರಿಗಳನ್ನು ನೇಮಿಸಿ ರಾಜ್ಯ

ಕಾರಭಾರ ನಡಿಸಿದನು. ಆದರೆ ಇವರು ಅವಿಚಾರದಿಂದ ಅವರಿಬ್ಬರನ್ನೂ ಸೆರೆಯೊಳಗಿಂದ ಬಿಟ್ಟರು. ಅವರು ದಂಡು ಕೂಡಿಸಿ, ಪಟ್ಟಣದ ಕೋಟೆಯೊಳಗೆ ಸೇರಿ, **ಚಿಕ್ಕಕೃಷ್ಣರಾಜ**ನೆಂಬ ಒಬ್ಬ ಬಾಲಕನನ್ನು ಪಟ್ಟಕ್ಕೆ ಕೂಡ್ರಿಸಿದರು. ೧೭೩೬ರಲ್ಲಿ ದೇವರಾಜನ ತಮ್ಮ **ನಂದಿರಾಜನು** ಮರಣಹೊಂದಿದನು. ಈತನು ದ್ರವ್ಯವಂತನಿದ್ದನು. ಆದರೆ ಸಾಯುವ ಮೊದಲು ತನ್ನ ಬಳಿಗಿದ್ದ ೮ ಲಕ್ಷ ರೂಪಾಯಿ ಸರಕಾರಕ್ಕೆ, ೨ ಲಕ್ಷ ರೂಪಾಯಿ ತನ್ನ ಹೆಂಡತಿಗೆ ಕೊಟ್ಟು, ಉಳಿದ ಹಣವನ್ನೆಲ್ಲ ಬಡವರಿಗೆ ಧರ್ಮಮಾಡಿದನು. ಇವನ ತರುವಾಯ ದೇವರಾಜನ ಮತ್ತೊಬ್ಬ ತಮ್ಮನಾದ **ಎರಡನೇ ನಂದಿರಾಜನು** ಮಂತ್ರಿಯಾದನು. ಮುಂದೆ ದೇವರಾಜನು ಈ ನಂದಿರಾಜನ ಮಗಳನ್ನು ಕೃಷ್ಣರಾಜನಿಗೆ ಕೊಟ್ಟು, ತಮ್ಮ ವಂಶದವರು ಸಿಂಹಾಸನಕ್ಕೆ ಬಾಧ್ಯರಾಗುವ ಹಾಗೆ ಮಾಡಿಟ್ಟನು (೧೭೪೮).

ಮಹಾರಾಷ್ಟ್ರದಲ್ಲಿ ನಾನಾಸಾಹೇಬನ ಹಣದ ಆಶೆಯು ತೀರಿದ್ದಿಲ್ಲ. ಇವನು ದೊಡ್ಡ ದಂಡಿನೊಡನೆ ಹೋಗಿ ಮೈಸೂರ ಸಂಸ್ಥಾನದಿಂದ ಕಪ್ಪ ತಕ್ಕೊಂಡು ತಿರುಗಿ ಬರುವಾಗ **ಗೋಕಾವಿ**ಯನ್ನು ಕೈವಶಮಾಡಿಕೊಂಡನು (೧೭೫೩). ಆಗ ಹೈದರಾಬಾದದಲ್ಲಿ ಫ್ರೆಂಚರ ಸೇನಾಪತಿಯಾದ **ಬುಸಿಯ** ಸಹಾಯದಿಂದ **ಸಲಾಬತಜಂಗನು** ನಿಜಾಮನಾಗಿದ್ದನು. ಇವನು ದುರ್ಬಲನೂ ಹೆಂಗಸಿನಂಥ ಸ್ವಭಾವದವನೂ ಇದ್ದನು. ಸವಣೂರಿನ ನಬಾಬನು ಮಹಾರಾಷ್ಟ್ರರ ಸೀಮೆಯಲ್ಲಿಯೂ ನಿಜಾಮನ ಸೀಮೆಯಲ್ಲಿಯೂ ದಾಳಿ ಮಾಡಿದ್ದರಿಂದ ನಾನಾಸಾಹೇಬನೂ ಸಲಾಬತಜಂಗನೂ ಕೂಡಿ ಹೋಗಿ ಸವಣೂರನ್ನು ತಕ್ಕೊಳ್ಳಲಾಗಿ, ನಬಾಬನು **ತೊರಗಲ್ಲು, ಬೆಳಗಾವಿ** ಮುಂತಾದ ೧೧ ಊರುಗಳನ್ನು ಪೇಶವೆಗೆ ಕೊಟ್ಟು ಒಡಂಬಡಿಕೆ ಮಾಡಿಕೊಂಡನು. ಇ. ಸ. ೧೭೫೭ರಲ್ಲಿ ನಾನಾಸಾಹೇಬನು ಮತ್ತೆ ಮೈಸೂರಿಗೆ ಹೋಗಿ ಎರಡನೇ ನಂದಿರಾಜನಿಂದ ೩೨ ಲಕ್ಷ ರೂಪಾಯಿ ತಕ್ಕೊಂಡು ಬಂದನು. ಆಗ ಅವನ ಹತ್ತರ ಅಷ್ಟು ಹಣವಿಲ್ಲದ ಕಾರಣ ನಾನಾಸಾಹೇಬನು ೫ ಲಕ್ಷ ನಗದು ತಕ್ಕೊಂಡು, ಉಳಿದ ಹಣದ ಸಲುವಾಗಿ **ಬೆಂಗಳೂರು, ಸೀರಾ** ಮುಂತಾದ ಕೆಲವು ಪರಗಣೆಗಳನ್ನು ಹಚ್ಚಿಕೊಂಡನು; ಹಾಗು ಈ ಸೀಮೆಯ ರಕ್ಷಣೆಗಾಗಿ ಒಬ್ಬ ಸರದಾರನನ್ನು ಇಟ್ಟುಬಂದನು. ಆದರೆ ನಂದಿರಾಜನ ಸರದಾರನಾದ **ಹೈದರನಾಯಕ**ನೆಂಬವನು ಈ ಸೀಮೆಯನ್ನು ತಿರುಗಿ ತಕ್ಕೊಳ್ಳಲು ನಾನಾಸಾಹೇಬನು ಇಬ್ಬರು ಸರದಾರರನ್ನು ಕಳಿಸಿದನು. ಇವರು ಹೈದರನನ್ನು

ಸೋಲಿಸಿ ೩೨ ಲಕ್ಷ ಕಪ್ಪ ತಕ್ಕೊಂಡು ಬಂದರು. ಮುಂದಿನ ವರ್ಷ ನಾನಾ ಸಾಹೇಬನ ಸೇನಾಪತಿಯಾದ ಸದಾಶಿವರಾಯನು ಉದಯಗಿರಿಯ ಹತ್ತರ ಎಸಗಿದ ಕಾಳಗದಲ್ಲಿ ಸಲಾಬತಜಂಗನನ್ನು ಪೂರ್ಣ ಸೋಲಿಸಿ, ಕರ್ನಾಟಕದ ಕೆಲವು ಸೀಮೆಗಳನ್ನು ಅವನಿಂದ ಸೆಳೆದುಕೊಂಡನು. ಇಲ್ಲಿಗೆ ಮಹಾರಾಷ್ಟ್ರರ ಘನತೆಯ ಪರಮಾವಧಿಯಾಯಿತು. ಇ. ಸ. ೧೭೬೧ರಲ್ಲಿ ದಿಲ್ಲಿಯ ಹತ್ತರ ಮಹಾರಾಷ್ಟ್ರರಿಗೂ ಅಫಗಾನರಿಗೂ ಆದ ಪಾಣಿಪತದ ಮಹಾಯುದ್ಧದಲ್ಲಿ ೨ ಲಕ್ಷ ಮಹಾರಾಷ್ಟ್ರ ಸೈನಿಕರು ತೀರಿದರು. ನಾನಾಸಾಹೇಬನು ಮುಂದೆ ೬ ತಿಂಗಳೊಳಗೆ ಮರಣಹೊಂದಿದನು.

ಮೈಸೂರಿನಲ್ಲಿ ನಂದಿರಾಜನ ಕಾರಭಾರವು ನಡೆದಾಗ ಅವನ ಸೈನ್ಯದಲ್ಲಿ ಹೈದರ ಅಲ್ಲಿ ಎಂಬ ಶೂರನು ಹೆಸರಿಗೆ ಬರುತ್ತಿದ್ದನಷ್ಟೇ. ಇವನು ಫತ್ತೇಖಾನ ನೆಂಬ ಒಬ್ಬ ಬಡ ಮುಸಲ್ಮಾನನ ಮಗನು; ಬೂದಿಕೋಟೆಯಲ್ಲಿ ೧೭೨೧ರಲ್ಲಿ

**ಹೈದರನ ಉದಯ.**

ಹುಟ್ಟಿದನು. ಇವನು ಚಿಕ್ಕಂದಿನಲ್ಲಿ ಬರೆಯಲಿಕ್ಕೂ ಓದಲಿಕ್ಕೂ ಕಲಿಯಲಿಲ್ಲ. ಆದರೆ ಶಿವಾಜಿಯ ಹಾಗೆ ತನ್ನ ಯುಕ್ತಿ ಚಾತುರ್ಯ ಶೌರ್ಯ ಸಾಹಸಗಳಿಂದ ಯೋಗ್ಯತೆಗೇರಿದನು. ನಂದಿರಾಜನು ಇವನ ಪರಾಕ್ರಮಕ್ಕೆ ಮೆಚ್ಚಿ ಇವನನ್ನು ದಿಂಡಿಗಲ್ಲಿನ ಫೌಜದಾರನನ್ನಾಗಿ ಮಾಡಿದನು. ಕೃಷ್ಣರಾಜನು ಹೈದರನ ಸಹಾಯದಿಂದ ನಂದಿರಾಜನನ್ನು ಕೆಲಸದಿಂದ ದೂರ ಮಾಡಿದನು; ಮುಂದೆ ಆ ಅಧಿಕಾರವು ಹೈದರನ ಕೈಸೇರಿತು. ಹೈದರನು ಈ ವರೆಗೆ ತನಗೆ ಸಹಾಯ ಮಾಡಿದ ಖಂಡೇರಾಯನೆಂಬ ಸರದಾರನನ್ನು ಸೆರೆಯಲ್ಲಿಟ್ಟು ತಾನೇ ಸರ್ವಸ್ವತಂತ್ರನಾಗಿ ಕಾರಭಾರ ಮಾಡಹತ್ತಿದನು. ಎರಡನೇ ಕೃಷ್ಣರಾಜನು ತೀರಿಕೊಂಡ ಕೂಡಲೇ ಹೈದರನು ರಾಜ



ಹೈದರ ಅಲ್ಲಿಯು.

ವಂಶಕ್ಕೆ ಸೇರಿದ ಅರಸುಮಕ್ಕಳುಗಳನ್ನೆಲ್ಲ ಕರಿಸಿ ದಿವಾಣಖಾನೆಯಲ್ಲಿ ಹಣ್ಣು ಹಂಪಲ ಬೆಂಡು ಬತ್ತಾಸು ಕತ್ತಿ ಢಾಲು ಮೊದಲಾದವುಗಳನ್ನು ಹರವಿ, ಬೇಕಾದವರು ಬೇಕಾದದ್ದನ್ನು ತೆಗೆದುಕೊಳ್ಳಿರೆಂದು ಹೇಳಿದನು. ಅವರವರು ತಮತಮಗೆ ಬೇಕಾದದ್ದನ್ನು ಆರಿಸಿಕೊಂಡರು. ಒಬ್ಬನು ಮಾತ್ರ ಬಲಗೈಯಿಂದ ಕತ್ತಿಯನ್ನೂ ಎಡಗೈಯಿಂದ ಒಂದು ನಿಂಬೆಯ ಹಣ್ಣನ್ನೂ ಆರಿಸಲು, ಹೈದರನು ಹರುಷದಿಂದ ಅವನನ್ನು ಕರೆದು ಇವನೇ ರಾಜಪುತ್ರನಾಗಲು ತಕ್ಕವನೆಂದು ಅವನಿಗೆ ಪಟ್ಟಕಟ್ಟಿ, ತಾನು ರಾಜಕಾರ್ಯಗಳನ್ನೆಲ್ಲ ನೋಡಹತ್ತಿದನು (೧೭೬೧).

ಈ ಸಮಯದಲ್ಲಿ ಹುಬ್ಬಳ್ಳಿಯ ವರೆಗೆ ಕರ್ನಾಟಕದ ಉತ್ತರಭಾಗವೂ, ಮುದಗಲ್ಲಿನ ವರೆಗೆ ಪೂರ್ವಭಾಗವೂ ಪೇಶವೆಯ ರಾಜ್ಯಕ್ಕೆ ಸೇರಿದ್ದವು.

**ಕರ್ನಾಟಕದ ನಾಡು ೧೭೬೧.**

ಇದರ ದಕ್ಷಿಣಕ್ಕೆ ಸವಣೂರ ನಬಾಬನ ಸೀಮೆ ಇತ್ತು. ಬಹುಶಃ ಯಾವತ್ತು ದಕ್ಷಿಣಕರ್ನಾಟಕವು ಹೈದರನ ಕೈ ಸೇರಿತ್ತು. ಈಶಾನ್ಯಭಾಗವು ನಿಜಾಮ ಅಲ್ಲಿಯ ಆಳಿಕೆಗೆ ಒಳಗಾಗಿತ್ತು. ಆದರೆ ಇನ್ನು ಮುಂದೆ ಈ ಸಂಸ್ಥಾನಿಕರು ತಮ್ಮತಮ್ಮೊಳಗೂ ಇಂಗ್ಲಿಷರ ಸಂಗಡಲೂ ಕದನಗಳನ್ನು ನಡಿಸಿ, ಕಡೆಯಲ್ಲಿ ಇಂಗ್ಲಿಷರಿಗೆ ಅಂಕಿತರಾದರು.

ಮೊದಲು ಹೈದರನು ಪ್ರಬಲನಾಗಹತ್ತಿದನು. ಅವನು ಪೇಶವೆಯ ಸೀರಾ

**ಹೈದರನ ಜಯಗಳು.**

ಪರಗಣೆಯನ್ನು ಕೈವಶ ಮಾಡಿಕೊಂಡ ಬಳಿಕ, ಹರಪನಹಳ್ಳಿ, ರಾಯದುರ್ಗ, ಚಿತ್ರದುರ್ಗಗಳ ನಾಯಕರ ಕೈಯಿಂದ ಕಪ್ಪ ತಕ್ಕೊಂಡನು; ತರುವಾಯ ಇಕ್ಕೇರಿಯ ರಾಜ್ಯಕ್ಕೆ ಕೈಹಾಕಿದನು. ಅವರ ರಾಜಧಾನಿಯಾದ ಬೇದನೂರ ನಗರವನ್ನು ಸುಲಿದು ಬಹಳ ದ್ರವ್ಯ ತಕ್ಕೊಂಡನು (೧೭೬೩). ಮುಂದೆ ಹೈದರನ ಘನತೆಗೆ ಈ ಹಣವೇ ಸಾಧನವಾಯಿತು. ಈ ನಗರವು ಸಿಕ್ಕದ್ದರಿಂದ ಹೊನ್ನಾವರದಿಂದ ದಕ್ಷಿಣಕ್ಕೆ ಕನ್ನಡ ಸೀಮೆಯೆಲ್ಲವು ಹೈದರನ ಕೈಸೇರಿತು. ಮುಂದಿನ ವರ್ಷ ಅವನು ಸ್ವಾದಿಯ ರಾಜ್ಯವನ್ನು ಆಕ್ರಮಿಸಿದನು. ಇಲ್ಲಿಯೂ ಇವನಿಗೆ ಬಹಳ ಹಣ ಸಿಕ್ಕಿತು. ಮುಂದಿನ ವರ್ಷ ಅವನು ಸವಣೂರಿನ ನಬಾಬನ ಸುತ್ತು ಹತ್ತಿದನು. ಹೈದರನು ಅವನ ರಾಜ್ಯವನ್ನೆಲ್ಲ ತಕ್ಕೊಂಡು ಪೇಶವೆಯ ರಾಜ್ಯದೊಳಗೆ ಹೊಕ್ಕು, ಧಾರವಾಡ ಮುಂತಾದ ಕೋಟೆಗಳನ್ನು ತಕ್ಕೊಂಡು ಮಲಾಪಹಾರಿಯ ವರೆಗೆ ದಾಳಿಯ ಮಾಡಿದನು.

ಇಷ್ಟರಲ್ಲಿ ಮಹಾರಾಷ್ಟ್ರದಲ್ಲಿ ನಾನಾಸಾಹೇಬನ ತರುವಾಯ ಮಾಧವ ರಾಯನೆಂಬವನು ಪೇಶವೆಯಾಗಿದ್ದನು. ಇವನು ೧೭ ವರ್ಷದವನಿದ್ದದರಿಂದ ಇವನ ಚಿಕ್ಕಪ್ಪನಾದ ರಘುನಾಥರಾಯನು ೨ ವರ್ಷ ಕಾರಭಾರ ನಡಿಸಿದನು. ಬಳಿಕ ಮಾಧವರಾಯನು ನಾನಾ ಫಡನೀಸನೆಂಬ ಮಂತ್ರಿಯ ಸಹಾಯದಿಂದ ರಾಜ್ಯವಾಳಿದನು. ನಾನಾನು ಚಾತುರ್ಯದಲ್ಲಿಯೂ ರಾಜಕಾರ್ಯದಲ್ಲಿಯೂ ಹೆಸರಾಗಿದ್ದನು. ದಕ್ಷಿಣದಲ್ಲಿ ಹೈದರನು ಪುಂಡಾಟ


ರಾಘೋಬ.

**ಮಾಧವ ರಾಯನೂ ಹೈದರನೂ.**

ನಡಿಸಿದ್ದನ್ನು ನೋಡಿ ಮಾಧವರಾಯನು ೪೦ ಸಾವಿರ ದಂಡಿನೊಡನೆ ಹೋಗಿ ರಟ್ಟೀಹಳ್ಳಿಯಲ್ಲಿ ಹೈದರನನ್ನು ಸುತ್ತುಗಟ್ಟಲು ಅವನು ಯುಕ್ತಿಯಿಂದ ಹಿಂದಕ್ಕೆ ಹೋಗಿ ಬೇದನೂರಿಗೆ ಸೇರಿಕೊಂಡನು. ಅಲ್ಲಿಯೂ ಪೇಶವೆಯ ದಂಡು ಸುತ್ತುಗಟ್ಟಿದ್ದರಿಂದ ಹೈದರನು ಪೇಶವೆಗೆ ೩೨ ಲಕ್ಷ ವರಹ ಕಪ್ಪ ಕೊಟ್ಟದ್ದಲ್ಲದೆ ಆತನ ಸೀಮೆಯನ್ನೂ ಸವಣೂರಿನ ನಬಾಬನ ಸೀಮೆಯನ್ನೂ ಹಿಂದಕ್ಕೆ ಕೊಟ್ಟನು (೧೭೬೪). ಪೇಶವೆಯು ತಿರುಗಿ ಹೋದ ಕೂಡಲೆ ಹೈದರನು ಕಾಲಿಕತ್ತದ ರಾಜ್ಯವನ್ನು ತಕ್ಕೊಂಡನು.

ಹೈದರನ ಪುಂಡಾಟವನ್ನು ನೋಡಿ ಇತ್ತ ಪುಣೆಯಲ್ಲಿ ಪೇಶವೆಯೂ ನಿಜಾಮ ಅಲ್ಲಿಯೂ ಇಂಗ್ಲಿಷರೂ ಕೂಡಿ ಹೈದರನನ್ನು ತೀರ ಮುರಿಯಬೇಕೆಂದು ಆಲೋಚನೆ ಮಾಡಿದರು. ಈ ಸುಮಾರಿಗೆ ಇಂಗ್ಲಿಷರು ಫ್ರೆಂಚರನ್ನು ಪೂರ್ಣ ಮುರಿಬಡಿದಿದ್ದರು; ಕ್ಲೈವನೆಂಬ ಮಹಾ ಕಲಿಯ ಸಾಹಸ ಚಾತುರ್ಯಗಳಿಂದ ಉತ್ತರ ಹಿಂದುಸ್ತಾನದಲ್ಲಿ ಕೆಲವು ಪ್ರಾಂತಗಳ ಕಂದಾಯ ವೆತ್ತುವ ಹಕ್ಕು ಪಡೆದಿದ್ದರು. ಹೈದರನು ಇಂಗ್ಲಿಷರ ಕೂಡ ಈ ವರೆಗೆ ಯುದ್ಧ ಮಾಡಿದ್ದಿಲ್ಲ. ಆದರೆ ಅವರ ಆಶ್ರಿತನಾದ ಕರ್ನಾಟಕದ ನವಾಬನ ಎಷ್ಟೋ ಕೋಟೆಗಳನ್ನು ಹಿಡಕೊಂಡಿದ್ದನು; ಇಂಗ್ಲಿಷರ ಸ್ನೇಹಿತನಾದ ನಿಜಾಮನ ಮೇಲೆ ದಂಡೆತ್ತಿ ಹೋಗಲಿಕ್ಕೆ ಅನುವಾಗಿದ್ದನು. ಆದರೆ ಪೇಶವೆಯು ಉಳಿ

ದಿಬ್ಬರ ದಂಡಿನ ಹಾದೀ ನೋಡದೆ, ಸೀರಾ ಪಟ್ಟಣವನ್ನು ತಕ್ಕೊಂಡು ಹೈದರ ನಿಂದ ೩೦ ಲಕ್ಷ ವರಹ ಕಪ್ಪ ತಕ್ಕೊಂಡು ತಿರುಗಿದನು (೧೭೬೭). ಬಳಿಕ ಹೈದರನು ನಿಜಾಮನನ್ನು ಒಡಕೊಂಡು, ಇಬ್ಬರೂ ಕೂಡಿ ಇಂಗ್ಲಿಷರ ಕೂಡ ಯುದ್ಧಕ್ಕೆ ಹೋಗಿ ಅಪಜಯಪಟ್ಟರು. ನಿಜಾಮನು ಮತ್ತೆ ಇಂಗ್ಲಿಷರ ಕೂಡ ಸ್ನೇಹ ಬೆಳಿಸಿ ಅವರೂ ತಾನೂ ಕೂಡಿ ಹೈದರನನ್ನು ಕೊಲ್ಲುವ ನಿಶ್ಚಯ ಮಾಡಿದನು. ಆ ಪ್ರಕಾರ ಇಂಗ್ಲಿಷರದೊಂದು ಹಡಗು ಪಡೆಯು ಹೋಗಿ, ಮಂಗಳೂರು ಮತ್ತು ಹೊನ್ನಾವರ ತಕ್ಕೊಂಡಿತು. ಹೈದರನು ಅಲ್ಲಿಗೆ ಹೋಗಿ ಅವರನ್ನು ಅಲ್ಲಿಂದ ಓಡಿಸಿಬಿಟ್ಟನು. ಹಾಗು ಇಂಗ್ಲಿಷರು ಬಿಟ್ಟುಹೋದ ಗಾಯಪಡೆದವರನ್ನು ಕ್ರೂರತನದಿಂದ ಕೊಲ್ಲಿಸಿದನು. ಇಂಗ್ಲಿಷರು ಬಾರಾ ಮಹಾಲ ಪ್ರಾಂತವನ್ನು ತಕ್ಕೊಂಡರು; ಹೈದರನು ಅಲ್ಲಿಂದಲೂ ಅವರನ್ನು ಓಡಿಸಿದನು. ಅವರು ಇನ್ನು ಮುಂದೆ ಒಬ್ಬರ ಸೀಮೆಯೊಳಗೊಬ್ಬರು ದಂಡು ತಕ್ಕೊಂಡು ಹೋಗಬಾರದೆಂತಲೂ, ಪ್ರಸಂಗ ಬಿದ್ದಾಗ ಒಬ್ಬರಿಗೊಬ್ಬರು ಸಹಾಯ ಮಾಡಬೇಕೆಂತಲೂ ಒಡಂಬಡಿಕೆ ಮಾಡಿಸಿಕೊಂಡನು. ಈ ಧೈರ್ಯ ದಿಂದ ಹೈದರನು ಪೇಶವೆಗೆ ಕೊಡತಕ್ಕ ಕಪ್ಪವನ್ನು ತಪ್ಪಿಸಿದನು. ಅದರಿಂದ ಪೇಶವೆಯ ಸರದಾರರು ಬಂದು ಹೈದರನ ಒಂದೆರಡು ಕೋಟೆಗಳನ್ನು ಹಿಡ ಕೊಂಡರು (೧೭೭೧). ಮುಂದಿನ ವರ್ಷ ಹೈದರನು ಮತ್ತೆ ಮಹಾರಾಷ್ಟ್ರ ರಿಂದ ಅಪಜಯಪಟ್ಟು ೩೬ ಲಕ್ಷ ರೂಪಾಯಿ ಕೊಟ್ಟು ಮುಂದೆ ವರ್ಷಕ್ಕೆ ೧೪ ಲಕ್ಷದಂತೆ ಕೊಡುತ್ತೇನೆಂದು ಒಡಂಬಟ್ಟನು. ಈಗ ಇಂಗ್ಲಿಷರು ಇವನಿಗೆ ನೆರವಾಗಲಿಲ್ಲ.

**ಇಂಗ್ಲಿಷರಿಗೂ ಹೈದರನಿಗೂ ಯುದ್ಧಗಳು.**

ಇದೇ ಸಂಧಿಗೆ ಪುಣೆಯಲ್ಲಿ ಮಾಧವರಾಯನು ತೀರಿಕೊಂಡನು. ಅವನ ತಮ್ಮ ನಾರಾಯಣರಾಯನು ಪೇಶವೆಯಾದನು. ಆದರೆ ಇದು ರಘುನಾಥನ ಹೆಂಡತಿಯಾದ ಆನಂದಿಬಾಯಿಗೆ ಸಹಿಸಲಿಲ್ಲ. ಈಕೆ ಬಹು ದುಷ್ಟಳೂ ಕ್ರೂರ ಳೂ ಇದ್ದಳು. ರಘುನಾಥರಾಯನು ಅವಿವೇಕಿಯೂ ತಿಳಿಗೇಡಿಯೂ ಆಗಿ ಹೆಂಡತಿ ಹೇಳಿದಂತೆ ಕೇಳುವನು. ಗಂಡನಿಗೆ ರಾಜ್ಯಾಧಿಕಾರವು ಸಿಗಬೇಕೆಂದು ಆಕೆಯು ನಾರಾಯಣರಾಯನನ್ನು ಕೊಲ್ಲಿಸಿದಳು. ರಘುನಾಥರಾಯನು ಎಲ್ಲರಿಗೂ ಬೇಡಾದ್ದ ರಿಂದ ಈಕೆಯ ಬಯಕೆಯು ಕೈಗೂಡಲಿಲ್ಲ. ನಾರಾಯಣರಾಯನ ಹೆಂಡತಿಯು

**ಪೇಶವೆಯರ ಒಳ ಒಡಕು.**

ಬಸುರಿದ್ದದರಿಂದ ಮಂತ್ರಿಗಳು ತಾವೇ ಕಾರಭಾರ ನಡಿಸಿದರು. ಆಕೆಯು ಗಂಡು ಮಗನನ್ನು ಹೆತ್ತಳು. ಈ ಕೂಸಿಗೆ ಸವಾಯಿ ಮಾಧವರಾಯನೆಂದು ಹೆಸರಿಟ್ಟು ಆತನ ಹೆಸರಿನಿಂದ ಅವರು ಕಾರಭಾರ ನಡಿಸಿದರು. ಇದನ್ನು ನೋಡಿ ರಘುನಾಥರಾಯನು ಇಂಗ್ಲಿಷರಿಗೆ ಕೆಲವು ಸೀಮೆ ಕೊಡಮಾಡಿ ತನ್ನ ಸಹಾಯಕ್ಕೆ ಕರೆದನು. ಆ ಮೇರೆಗೆ ಅವರು ಹಲವು ಸಾರೆ ದಂಡೆತ್ತಿ ಬಂದರೂ ಪೇಶವೆಯ ಮುಖ್ಯ ಮಂತ್ರಿಯಾದ ನಾನಾಫಡನೀಸನ ಯುಕ್ತಿಯಿಂದಲೂ ಅವನ ಕೈಕೆಳಗಿನ ಸರದಾರರ ಸಹಾಯದಿಂದಲೂ ಇವರು ಹಿಡಿದ ಕಾರ್ಯವು ನೆರವೇರಲಿಲ್ಲ.



ನಾನಾಫಡನೀಸ.

**ಹೈದರನ ಏರಿಕೆ.**

ಈ ಮೇರೆಗೆ ಪುಣೆಯಲ್ಲಿ ತೊಂದರೆಗಳು ನಡೆದದ್ದರಿಂದ, ಹೈದರನಿಗೆ ತನ್ನ ರಾಜ್ಯ ಬೆಳಿಸಲಿಕ್ಕೆ ಅವಕಾಶ ಸಿಕ್ಕಿತು. ಇವನು ಕೊಡಗು ನಾಡು ತಕ್ಕೊಂಡು ಬಹು ಜನರನ್ನು ದಯೆಯಿಲ್ಲದೆ ಕೊಂದನು. ತರುವಾಯ ಪೇಶವೆಗೆ ತಾನು ಕೊಟ್ಟ ಸೀಮೆಯನ್ನು ತಿರುಗಿ ತಕ್ಕೊಂಡು, ಬಳ್ಳಾರಿಯ ಪ್ರಾಂತವನ್ನು ಆಕ್ರಮಿಸಿ ಕಡಪೆಯ ನಬಾಬನನ್ನು ಓಡಿಸಿ ಕೃಷ್ಣೆಯ ವರೆಗೆ ದಾಳಿ ಮಾಡಿದನು. ನಾನಾಫಡನೀಸನು ದಂಡು ಕಳಿಸಲು ಹೈದರನು ಹಣ ಕೊಟ್ಟು ಅವರ ಸ್ನೇಹ ಮಾಡಿಕೊಂಡನು. ಇದಲ್ಲದೆ ಸವಣೂರಿನ ನಬಾಬನ ಮಗನಿಗೆ ತನ್ನ ಮಗಳನ್ನು ಕೊಟ್ಟು ಅವನ ಮಗಳನ್ನು ತನ್ನ ಎರಡನೇ ಮಗನಿಗೆ ತಕ್ಕೊಂಡನು.

**ಹೈದರನಿಗೂ ಇಂಗ್ಲಿಷರಿಗೂ ಯುದ್ಧ.**

ಇ. ಸ. ೧೭೬೯ರಲ್ಲಿ ಒಡಂಬಟ್ಟಂತೆ ಇಂಗ್ಲಿಷರು ಸಹಾಯ ಮಾಡದ್ದರಿಂದ ಹೈದರನೂ ರಘುನಾಥರಾಯನ ಪಕ್ಷ ಸ್ವೀಕರಿಸಿದ್ದರಿಂದ ಮಹಾರಾಷ್ಟ್ರರೂ ಇಂಗ್ಲಿಷರ ಶತ್ರುಗಳಾಗಿದ್ದರು. ಇವರಿಬ್ಬರೂ ಕೂಡಿ ಇಂಗ್ಲಿಷರನ್ನು ಈ ದೇಶದಿಂದ ಹೊರಗೆ ಹಾಕುವ ನಿಶ್ಚಯಮಾಡಿದರು (೧೭೭೬). ಇಂಗ್ಲಿಷರು

ಒಮ್ಮೆಲೆ ಇವರಿಬ್ಬರ ಕೂಡ ಯುದ್ಧ ನಡಿಸಬೇಕಾಯಿತು. ಹೈದರನು ಫ್ರೆಂಚ ಸರದಾರರ ಕೈಕೆಳಗೆ ಕವಾಯಿತು ಕಲಿತಂಥ ೯೦,೦೦೦ ಸೈನ್ಯ ಸಿದ್ಧ ಮಾಡಿ ಒಂದೇ ಸವನೆ ೩ ವರ್ಷ ಯುದ್ಧ ನಡಿಸಿದನು. ಪೊಲಿಲೂರ ಹತ್ತರ ಎರಡು ಸಾರೆ, ಕಾವೇರಿಯ ದಡದಲ್ಲಿ ಒಮ್ಮೆ ಇಂಗ್ಲಿಷರು ಸೋತರು. ಆದರೆ ಪೋರ್ಟೋನೋವೊ, ಸೊಲಿಮಂಗಡ, ತಲಚೇರಿ, ಈ ಮೂರು ಕಾಳಗಗಳಲ್ಲಿ ಹೈದರನಿಗೆ ಸೋಲು ಒದಗಿತು (೧೭೮೧). ಹೈದರನು ಇ. ಸ. ೧೭೮೨ರಲ್ಲಿ ಮರಣಹೊಂದಿದನು.


ಟೀಪು.

**ಟೀಪೂ ಸುಲ್ತಾನ.**

ಹೈದರನ ತರುವಾಯ ಅವನ ಮಗ ಟೀಪೂ ಪಟ್ಟವೇರಿ ಸುಲ್ತಾನನೆಂಬ ಪದವಿಯನ್ನು ಧರಿಸಿದನು. ಇವನು ತಂದೆಯಂತೆ ಶೂರನೂ ಪರಾಕ್ರಮಿಯೂ ಇದ್ದರೂ ಅವನಷ್ಟು ವಿಚಾರಿಯೂ ದಕ್ಷನೂ ಅಲ್ಲ; ಬಹು ಕ್ರೂರನಿದ್ದನು. ಇವನಿಗೆ ಸ್ವಧರ್ಮಾಭಿಮಾನ ಬಹಳವಿತ್ತು. ಆದ್ದರಿಂದ ಇವನು ಎಷ್ಟೋ ಹಿಂದೂಜನರನ್ನು ಬಲಾತ್ಕಾರದಿಂದ ಮುಸಲ್ಮಾನರನ್ನು ಮಾಡಿದನು. ಪೂರ್ಣಯ್ಯನೆಂಬವನು ಇವನ ಮುಖ್ಯ ಮಂತ್ರಿಯಾಗಿದ್ದನು. ಪಟ್ಟಕ್ಕೆ ಕೂತ ಬಳಿಕ ೨ ವರ್ಷಗಳಲ್ಲಿ ಇವನಿಗೂ ಇಂಗ್ಲಿಷರಿಗೂ ಹಲವು ಕಾಳಗಗಳಾಗಿ ಕಡೆಗೆ ಮಂಗಳೂರಲ್ಲಿ ಒಡಂಬಡಿಕೆಯಾಯಿತು (೧೭೮೪). ತರುವಾಯ ಇವನು ಕೊಡಗು, ತುಳು ಸೀಮೆಗಳನ್ನು ಆಕ್ರಮಿಸಿ, ಒಂದು ಲಕ್ಷ ಜನರನ್ನು ಹಿಡಿದೊಯ್ದು ಮುಸಲ್ಮಾನರನ್ನು ಮಾಡಿದನು. ಬಳಿಕ ಉತ್ತರದಲ್ಲಿ ಪೇಶವೆ ನಿಜಾಮರ ರಾಜ್ಯಗಳನ್ನು ಹಾಳುಮಾಡಿದನು. ಇವರು ಕೂಡಿಬಂದು ಎಷ್ಟೋ ಕಾಳಗಗಳಲ್ಲಿ ಅವನನ್ನು ಸೋಲಿಸಿದರು. ಅವನು ಪ್ರತಿಯೊಬ್ಬರಿಗೆ ೪೫ ಲಕ್ಷ ರೂಪಾಯಿ ಕೊಟ್ಟು ತುಂಗಭದ್ರೆಯೇ ತನ್ನ ಉತ್ತರ ಮೇರೆ ಎಂದು ಒಡಂಬಟ್ಟನು (೧೭೮೭). ಆದ್ದರಿಂದ ಬಾದಾಮಿ, ನರಗುಂದ, ಕಿತ್ತೂರ ಮುಂತಾದ ಕೋಟೆಗಳು ಮರಳಿ ಮಹಾರಾಷ್ಟ್ರರ ಕೈಸೇರಿದವು.

ತರುವಾಯ ಟೀಪೂನು ಇಂಗ್ಲಿಷರ ಸ್ನೇಹಿತನಾದ **ತ್ರಾವಣಕೋರದ** ಅರಸನ ಸೀಮೆಯ ಮೇಲೆ ದಂಡೆತ್ತಿ ಹೋದ್ದರಿಂದ ಇ. ಸ. ೧೭೮೯ರಿಂದ ಇಂಗ್ಲಿಷರಿಗೂ ಇವನಿಗೂ ಇದ್ದ ಸ್ನೇಹವು ಕಡಿದುಹೋಯಿತು.

**ಮೈಸೂರಿನ ೩ನೇ ಯುದ್ಧ.**

ಇ. ಸ. ೧೭೯೦ರಲ್ಲಿ ಇಂಗ್ಲಿಷರೂ ಮಹಾರಾಷ್ಟ್ರರೂ ನಿಜಾಮನೂ ಕೂಡಿ ಟೀಪೂನ ತಲೆಬಗ್ಗಿಸುವ ಬಗ್ಗೆ ಒಪ್ಪಂದ ಮಾಡಿಕೊಂಡರು. ಕೆಲವು ಮಹಾರಾಷ್ಟ್ರ ಸರದಾರರೂ ನಿಜಾಮನ ಮಗನೂ ಇಂಗ್ಲಿಷರೂ ಟೀಪೂನ ಸೀಮೆಯನ್ನು ಹೊಕ್ಕರು. ಇಂಗ್ಲಿಷರ ಗವರ್ನರ ಜನರಲ್ಲನಾದ **ಲಾರ್ಡ ಕಾರ್ನವಾಲೀಸನು** ತಾನೇ ಯುದ್ಧಕ್ಕೆ ಹೋಗಿ, **ಬೆಂಗಳೂರು** ತಕ್ಕೊಂಡು, ಪೇಶವೆ-ನಿಜಾಮರ ಸೈನ್ಯಗಳನ್ನು ಕೂಡಿಕೊಂಡು ಶ್ರೀರಂಗಪಟ್ಟಣವನ್ನು ಸುತ್ತುಗಟ್ಟಿದನು. ೧೭೯೨ರಲ್ಲಿ ಟೀಪೂನು ಒಪ್ಪಂದ ಮಾಡಿಕೊಂಡನು; ಮೂವರಿಗೂ ಕೂಡಿ ಮೂರು ಕೋಟಿ ರೂಪಾಯಿಗಳನ್ನು ಕೊಟ್ಟದ್ದಲ್ಲದೆ ತನ್ನ ಅರ್ಧರಾಜ್ಯವನ್ನು ಬಿಟ್ಟುಕೊಟ್ಟನು. ಈ ಹೊಸ ಸೀಮೆಯಲ್ಲಿ ಮಹಾರಾಷ್ಟ್ರರಿಗೆ ವರದಾನದಿಯ ಉತ್ತರ ಸೀಮೆ, ನಿಜಾಮನಿಗೆ **ಗುತ್ತಿ, ಕಡಪೆ, ಮುದಗಲ್ಲು** ಎಂಬ ಪ್ರಾಂತಗಳೂ, ಇಂಗ್ಲಿಷರಿಗೆ ದಿಂಡಿಗಲ್ಲು, **ಬಾರಾಮಹಾಲ, ಮಲಿಯಾಳ, ಕೊಡಗು** ಎಂಬ ಪ್ರಾಂತಗಳೂ



ಲಾರ್ಡ ಕಾರ್ನವಾಲೀಸ.

ಬಂದವು. ಇಂಗ್ಲಿಷರು ಕೊಡಗು ದೇಶವನ್ನು ಮೊದಲಿನ ಅರಸನಿಗೆ ಕೊಟ್ಟರು. ಈ ಯುದ್ಧದಲ್ಲಿ ಮಹಾರಾಷ್ಟ್ರರು ಶಿವಮೊಗ್ಗೆಯಲ್ಲಿ ಅತಿ ಕ್ರೂರಕೃತ್ಯ ಮಾಡಿದರು. ಟೀಪೂನು ಇಷ್ಟು ಹಾನಿಯಾದದ್ದೆಲ್ಲ ಇಂಗ್ಲಿಷರಿಂದಲೇ ಎಂದು ಕಂಡು ಅವರನ್ನು ಮುರಿದುಹಾಕಬೇಕೆಂಬ ಹವ್ಯಾಸಕ್ಕೆ ಬಿದ್ದನು. ಇವನು ಫ್ರೆಂಚರ ಚಕ್ರವರ್ತಿಯಾಗಿದ್ದ **ನೆಪೋಲಿಯನ್ ಬೋನಾ**

ಪಾರ್ಟನ ಕೂಡ ಒಪ್ಪಂದ ಮಾಡಿ, ಅವನ ಸರದಾರರ ಸಹಾಯದಿಂದ ಹೊಸ ಸೈನ್ಯವನ್ನು ಸಿದ್ಧಮಾಡಿದನು; ಹಾಗು ತನ್ನಲ್ಲಿದ್ದ ಇಂಗ್ಲಿಷ ವಕೀಲರಿಗೆ ಅಪ ಮಾನ ಮಾಡಿ ಕಲಹಕ್ಕೆ ಕಾರಣ ಮಾಡಿಕೊಟ್ಟನು. ಕೂಡಲೆ ಇಂಗ್ಲಿಷರು ೩೦,೦೦೦ ತಮ್ಮ ದಂಡು, ೨೦,೦೦೦ ನಿಜಾಮನ ದಂಡು ತಕ್ಕೊಂಡು ಯುದ್ಧಕ್ಕೆ ಬಂದರು.

**ಮೈಸೂರಿನ ೪ನೇ ಯುದ್ಧವು.**

ಇಂಗ್ಲಿಷರು ಟೀಪೂನನ್ನು ಸಿದ್ದೇಶ್ವರದ ಹತ್ತರ ಒಮ್ಮೆ, ಮನವಳ್ಳಿಯ ಹತ್ತರ ಒಮ್ಮೆ ಹೀಗೆ ಎರಡು ಸಾರೆ ಸೋಲಿಸಿ, ಕಡೆಗೆ ಶ್ರೀರಂಗಪಟ್ಟಣ ವನ್ನು ಮುತ್ತಿದರು (೧೭೯೯). ಅಲ್ಲಿ ೧೯ ದಿವಸ ಅತಿ ಭಯಂಕರವಾದ ಕಾಳಗವೆಸಗಿದ ಬಳಿಕ ಕೋಟೆಯು ಇಂಗ್ಲಿಷರ ಕೈಸೇರಿತು. ಟೀಪೂ ಯುದ್ಧ ದಲ್ಲಿ ಬಿದ್ದು ಸತ್ತನು. ಇಂಗ್ಲಿಷರು ಅವನ ಕುಟುಂಬದವರನ್ನು ವೆಲ್ಲೂರಿಗ ಕಳಿಸಿ, ಹಿಂದಿನ ಅರಸನ ಮಗನಾದ ಕೃಷ್ಣರಾಜನೆಂಬ ೫ ವರ್ಷದ ಹುಡುಗ



ಟೀಪುವಿನ ಕೊನೆಯ ಪ್ರಯತ್ನ.

ನನ್ನು ಪಟ್ಟಕ್ಕೆ ಕುಳ್ಳಿರಿಸಿ, ಪೂರ್ಣಯ್ಯನಿಗೇ ರಾಜ್ಯದ ಕಾರಭಾರ ಹೇಳಿದರು. ಅವರು ಟೀಪೂನ ರಾಜ್ಯದೊಳಗಿನ ಗರಮಕೊಂಡ, ಗುತ್ತಿ ಮುಂತಾದ ಕೆಲವು ಪ್ರಾಂತಗಳನ್ನು ನಿಜಾಮನಿಗೆ ಕೊಟ್ಟು, ಕಾನಡಾ, ಕೊಯಿಮುತ್ತೂರು,

ವಾಯನಾಡು ಎಂಬ ಪ್ರಾಂತಗಳನ್ನು ತಮಗಿಟ್ಟುಕೊಂಡು, ಉಳಿದ ರಾಜ್ಯ ವನ್ನೆಲ್ಲ ಕೃಷ್ಣರಾಜನಿಗೆ ಕೊಟ್ಟರು. ಈ ಕಾಲಕ್ಕೆ ಇಂಗ್ಲಿಷರು ಯಾವತ್ತು ರಾಜ್ಯವನ್ನು ತಾವೇ ಆಕ್ರಮಿಸಿದ್ದರೆ, ಯಾರೂ ಅವರ ಕೈ ಹಿಡಿಯುವ ಹಾಗಿ



ಮೈಸೂರ ಕೃಷ್ಣರಾಜ ಒಡೆಯರವರು.

ದ್ದಿಲ್ಲ; ಆದರೆ ಅವರು ಹಾಗೆ ಮಾಡದೆ ಮೊದಲಿನ ರಾಜವಂಶವನ್ನು ತಿರುಗಿ ಸ್ಥಾಪಿಸಿದ್ದು ಬಹಳ ಔದಾರ್ಯದ ಮಾತು. ಅದರಿಂದ ಅವರಿಗೆ ಜನರಲ್ಲಿ ಬಹಳ ದೊಡ್ಡಸ್ತಿಕೆ ಬಂತು.

ನಾನಾಫಡನೀಸನ ಅಮಲಿನಲ್ಲಿ ಇಂಗ್ಲಿಷರಿಗೆ ಸಹ ಮಹಾರಾಷ್ಟ್ರರ ಹೆದರಿಕೆ ಇತ್ತು. ಮಾಧವರಾಯನನ್ನು ಇವನು ಬಹು ಇಕ್ಕಟ್ಟಿನ ಪ್ರತಿಬಂಧ ದೊಳಗೆ ಇಟ್ಟದ್ದರಿಂದ ಅವನು ಅದನ್ನು ತಾಳಲಾರದೆ ಇ. ಸ. ೧೭೯೫ರಲ್ಲಿ ಮಾಳಿಗೆಯ ಮೇಲಿಂದ ಹಾರಿ ಪ್ರಾಣಬಿಟ್ಟನು. ಮಾಧವರಾಯನಿಗೆ ಮಗ

**ಪೇಶವೇ ಬಾಜೀರಾಯ.**

ನಿಲ್ಲದ್ದರಿಂದ ನಾನಾಫಡನೀಸನು ರಘುನಾಥರಾಯನ ಮಗನಾದ **ಬಾಜೀರಾಯನಿಗೆ** ಪಟ್ಟಗಟ್ಟಿದನು. ಬಾಜೀರಾಯನು ಸುರೂಪಿಯೂ ಮಾತುಕಥೆಯಲ್ಲಿ ಚತುರನೂ ಇದ್ದನು. ಆದರೆ ಧೈರ್ಯ, ಪರಾಕ್ರಮ, ವಿಶ್ವಾಸ, ಪ್ರಮಾಣಿಕತನ ಮುಂತಾದ ರಾಜರಲ್ಲಿ ಇರತಕ್ಕ ಗುಣಗಳು ಇವನಲ್ಲಿ ಇರಲಿಲ್ಲ. ಇವನು ಪಟ್ಟವೇರಿದ ಮೇಲೆ ಬೇಗ ನಾನಾಫಡನೀಸನನ್ನು ಅಧಿಕಾರದಿಂದ ದೂರಮಾಡಿ, ಸೆರೆಯಲ್ಲಿಟ್ಟನು; ಮುಖ್ಯ ಸರದಾರರಲ್ಲಿ ವೈಮನಸು ಹುಟ್ಟಿಸಿದನು; ಕೀಳುಜನರನ್ನು ಮುಂದಕ್ಕೆ ತಂದು ಪ್ರಜೆಗಳಿಗೆಲ್ಲ ಅಪ್ರಿಯನಾದನು. ಪುಣೆಯ ದರಬಾರಿನಲ್ಲಿ ನಾನಾಫಡನೀಸನಿರುವ ಮಟ್ಟಿಗೆ ಇಂಗ್ಲಿಷರ ಕೈಸೇರಿದ್ದಿಲ್ಲ. ಎವನು ಇ. ಸ. ೧೮೦೦ ರಲ್ಲಿ ತೀರಲಾಗಿ, ಮಹಾರಾಷ್ಟ್ರರಲ್ಲಿ ಸಾತಾರೆ ಕೊಲ್ಲಾಪುರದ ಅರಸರೂ ಉತ್ತರ ಕರ್ನಾಟಕದಲ್ಲಿ **ಧೋಂಡೋಜಿ ವಾಘನೆಂಬ** ಪುಂಡನೂ ದಾಳಿ ಎಬ್ಬಿಸಿದರು. ಇದನ್ನು ಮುರಿಯುವದರಲ್ಲಿ



ಬಾಜೀರಾಯನು.

ನಿಪ್ಪಾಣಿಯ ದೇಸಾಯಿಯಾದ **ನಿಂಬಾಳಕರನೆಂಬ** ಸರದಾರನು ಬಾಜೀರಾಯನಿಗೆ ಬಹಳ ನೆರವಾದನು. ಇದಕ್ಕಾಗಿ ಬಾಜೀರಾಯನು ಅವನಿಗೆ **ಮನ್ನೊಳ್ಳಿ,**

**ಬಾಜೀರಾಯನ ಅವ್ಯವಸ್ಥೆ.**

ಹುಕ್ಕೇರಿ ಮುಂತಾದ ೬ ಲಕ್ಷದ ಸೀಮೆಯನ್ನು ಕೊಟ್ಟದ್ದರಿಂದ ಮಹಾರಾಷ್ಟ್ರ ಸರದಾರರು ಮುನಿದರು. ಇದೇ ಸಮಯದಲ್ಲಿ **ಯಶವಂತರಾವ ಹೋಳಕರನೆಂಬ** ದೊಡ್ಡ ಸರದಾರನ ತಮ್ಮನ ಮೇಲೆ ಬಾಜೀರಾಯನು ಸುಳ್ಳುತಪ್ಪುಹೊರಿಸಿ ಅವನನ್ನು

ಕೊಲ್ಲಿಸಿದನು. ಅದರಿಂದ ಯಶವಂತರಾಯನು ದೊಡ್ಡ ದಂಡಿನೊಡನೆ ಪುಣೆಗೆ ಬಂದು ಬಾಜೀರಾಯನನ್ನು ಓಡಿಸಿದನು. ಅವನಿಗೆ ಸಹಾಯಮಾಡುವಂಥ ಅಭಿಮಾನಿಗಳು ಯಾರೂ ಉಳಿಯಲಿಲ್ಲ. ಅದರಿಂದ ಬಾಜೀರಾಯನು ಇಂಗ್ಲಿಷರಿಗೆ ಶರಣುಹೋದನು. ಮೈಸೂರಿನ ೪ನೇ ಯುದ್ಧವು ಆರಂಭವಾಗುವದಕ್ಕಿಂತ ಮೊದಲು ಇಂಗ್ಲಿಷರಿಗೂ ನಿಜಾಮನಿಗೂ ಒಪ್ಪಂದವಾಗಿ ಇಂಗ್ಲಿಷರು ನಿಜಾಮನ ಸಂರಕ್ಷಣೆಗಾಗಿ ಅವನ ರಾಜ್ಯದಲ್ಲಿ ೬೦೦೦ ದಂಡು ಇಟ್ಟು, ಅವರು ತಮಗೆ ಬೇಕಾದಲ್ಲಿ ಆ ದಂಡು ಯುದ್ಧಕ್ಕೆ ಒಯ್ಯಬಹುದೆಂತಲೂ ನಿಜಾಮನು ಫ್ರೆಂಚರನ್ನು ತನ್ನ ರಾಜ್ಯದೊಳಗೆ ಇರಗೊಡಬಾರದೆಂತಲೂ ಗೊತ್ತಾಯಿತು. ಆ ದಂಡಿನ ವೆಚ್ಚಕ್ಕಾಗಿ ನಿಜಾಮನು ಕಡಪೆ, ಬಳ್ಳಾರಿ ಇವೆರಡು ಜಿಲ್ಹೆಗಳನ್ನು ಇಂಗ್ಲಿಷರಿಗೆ ಕೊಟ್ಟನು. ಬಾಜೀರಾಯನೂ

**ಇಂಗ್ಲಿಷರೊಡನೆ ಒಪ್ಪಂದ.**

ಇದೇ ಪ್ರಕಾರ ಈಗ ಇಂಗ್ಲಿಷರೊಡನೆ ಒಪ್ಪಂದಮಾಡಿಕೊಂಡು ಅವರ ದಂಡಿನ ವೆಚ್ಚಕ್ಕಾಗಿ ಧಾರವಾಡ ಮುಂತಾದ ಸೀಮೆಗಳನ್ನು ಹಚ್ಚಿಕೊಡಲಿಕ್ಕೆ ಒಡಂಬಟ್ಟನು. ಆ ಕಾರಣ ಇಂಗ್ಲಿಷರು ಬಾಜೀರಾಯನಿಗೆ ಸಹಾಯಮಾಡಿ, ಅವನನ್ನು ಮತ್ತೆ ಪುಣೆಯಲ್ಲಿ ತಂದು ಸ್ಥಾಪಿಸಿದರು (೧೮೦೨). ಇಲ್ಲಿಗೆ ಮಹಾರಾಷ್ಟ್ರರ ಸ್ವಾತಂತ್ರ್ಯವು ನಷ್ಟವಾಯಿತು ಎಂದು ಹೇಳಬಹುದು.

ಈ ಬಗೆಯಾಗಿ ಬಾಜೀರಾಯನು ಇಂಗ್ಲಿಷರ ಸ್ನೇಹ ಸಂಪಾದಿಸಿದರೂ ಅವರ ಕೂಡ ವಿಶ್ವಾಸದಿಂದ ನಡೆಯಲಿಲ್ಲ; ಕೀಳುಜನರ ಸಹವಾಸಕ್ಕೆ ಬಿದ್ದು

**ಬಾಜೀರಾಯನ ಒಳಸಂಚು.**

ಇಂಗ್ಲಿಷರನ್ನು ತನ್ನ ರಾಜ್ಯಬಿಡಿಸಿ ಹೊರಗೆ ಹಾಕುವದಕ್ಕೆ ನೀಚತನದ ಒಳಸಂಚು ನಡಿಸಿದನು. ಅವರು ಆಗಾಗ್ಗೆ ಹೇಳಿದ ಆಪ್ತಾಲೋಚನೆಗಳನ್ನು ಮನ್ನಿಸಲಿಲ್ಲ; ವಿಶ್ವಾಸಘಾತದಿಂದ ಅವರಿಗೆ ಕೇಡು ಬಗೆದನು. ಪೆಂಢಾರಿಗಳೆಂಬ ಕೀಳುತರದ ಮುಸಲ್ಮಾನರಿಗೆ ಚುಚ್ಚಿ, ದೇಶದಲ್ಲಿ ಬಹಳ ಕೊಲೆ-ಸುಲಿಗೆಗಳನ್ನುಂಟುಮಾಡಿದನು. ಕಡೆಯಲ್ಲಿ ಇ. ಸ. ೧೮೧೭ರಲ್ಲಿ ಇವನಿಗೂ ಇಂಗ್ಲಿಷರಿಗೂ ಖಡಕಿಯಲ್ಲಿ ಕಾಳಗವಾಗಿ ಬಾಜೀರಾಯನು ಸೋತು ಓಡಿಹೋದನು. ಮುಂದೆ ಅವನು ಮತ್ತೂ ಎರಡು ಸಾರೆ ಸೋತ ಬಳಿಕ ಅವನ ಸರದಾರರು ಯಾರೂ ಅವನಿಗೆ ಆಶ್ರಯ ಕೊಡಲಿಲ್ಲ. ಆದ್ದರಿಂದ ಅವನು ತಾನಾಗಿ ಇಂಗ್ಲಿಷರ ಕೈಸೇರಿದನು. ಅವರು ಅವನಿಗೆ ವರ್ಷಕ್ಕೆ ೮ ಲಕ್ಷ ರೂಪಾಯಿ ಗೊತ್ತುಮಾಡಿ

ಭಾಗೀರಥಿಯ ತೀರದಲ್ಲಿ **ಬಿಠೂರ** ಎಂಬ ಗ್ರಾಮದೊಳಗೆ ಅವನನ್ನು ಒಯ್ದಿಟ್ಟರು. ಈ ಮೇರೆಗೆ ದಕ್ಷಿಣದಲ್ಲಿ ಕಡೆಯ ಹಿಂದೂ ಅರಸರಾದ ಪೇಶವೆಯರ ವಂಶವು ಮುಗ್ಗಿತು. ಇಂಗ್ಲಿಷರು ಮುಂದೆ ಒಂದು ವರ್ಷದೊಳಗೆ ಬಾಜೀರಾಯನ ರಾಜ್ಯವನ್ನೆಲ್ಲ ಕೈವಶಮಾಡಿಕೊಂಡು, ಎಲ್ಲ ಕಡೆಯಲ್ಲಿ ಶಾಂತತೆಯನ್ನುಂಟುಮಾಡಿದರು (೧೮೧೮).

ಸಾತಾರೆಯ ಅರಸನಾದ **ಪ್ರತಾಪಸಿಂಹ**ನನ್ನು ಬಾಜೀರಾಯನು ಸೆರೆಯಲ್ಲಿಟ್ಟಿದ್ದನು. ಇಂಗ್ಲಿಷರು ಅವನನ್ನು ತಂದು ಪುನಃ ಸಾತಾರೆಯಲ್ಲಿ ಸ್ಥಾಪಿಸಿ, **ನೀರಾ, ವರದಾ** ಇವೆರಡು ಹೊಳೆಗಳ ನಡುವಿನ ೧೬ ಲಕ್ಷದ ರಾಜ್ಯವನ್ನು ಅವನಿಗೆ ಕೊಟ್ಟರು (೧೮೧೮). ಇದೇ ಮೇರೆಗೆ ಅವರು ಪಟವರ್ಧನರು ಮುಂತಾದ ಹಲಕೆಲವು ಸರದಾರರ ರಾಜ್ಯಗಳನ್ನು ಅವರವರಿಗೆ ಬಿಟ್ಟುಕೊಟ್ಟರು. ಇದರಿಂದ ಇಂಗ್ಲಿಷರ ಔದಾರ್ಯ-ದೊಡ್ಡಸ್ತಿಕೆಗಳ ಕೀರ್ತಿಯು ಜನರೊಳಗೆ ಹಬ್ಬಿ, ಅವರನ್ನು ಎಲ್ಲರು ನಂಬಹತ್ತಿದರು.

**ಇಂಗ್ಲಿಷರ ಔದಾರ್ಯ.**

ಇತ್ತ ಮೈಸೂರಿನಲ್ಲಿ ಇಂಗ್ಲಿಷರು ಕೃಷ್ಣರಾಯನಿಗೆ **ಪೂರ್ಣಯ್ಯ**ನೆಂಬ ಕಾರಭಾರಿಯನ್ನು ನೇಮಿಸಿ ಕೊಟ್ಟಿದ್ದರಷ್ಟೇ. ಅವನು ೧೨ ವರ್ಷ ಬಹು ಚಾತುರ್ಯದಿಂದ ಕಾರಭಾರ ನಡಿಸಿ, ಖಜಾನೆಯಲ್ಲಿ ೩ ಕೋಟಿ ರೂಪಾಯಿ ಸಂಗ್ರಹ ಮಾಡಿ, ಯಾವತ್ತು ಜನರ ಪ್ರೀತಿಯನ್ನು ಸಂಪಾದಿಸಿಕೊಂಡ ಬಳಿಕ ಕಾರಭಾರ ಬಿಟ್ಟನು (೧೮೧೨). ಆಗ ಕೃಷ್ಣರಾಜನು ತಾನೇ ಕಾರಭಾರ ಮಾಡಹತ್ತಿದನು. ಇತ್ತ ಹೈದರಾಬಾದದಲ್ಲಿ ಇಂಗ್ಲಿಷರ ಸ್ನೇಹಿತನಾದ ನಿಜಾಮ ಅಲ್ಲಿಯು ೧೮೦೩ರಲ್ಲಿ ಮರಣಹೊಂದಿದನು. ಈ ಸುಮಾರಿಗೆ ಇಂಗ್ಲಿಷರು **ಭೋಸಲೆ** ಎಂಬ ಮಹಾರಾಷ್ಟ್ರ ಸರದಾರನ ಕೂಡ ಒಪ್ಪಂದ ಮಾಡಿಕೊಂಡಾಗ ಅವರಿಗೆ ಬಂದ ವರ್‍ಹಾಡಪ್ರಾಂತವನ್ನು ನಿಜಾಮನಿಗೆ ಕೊಟ್ಟುಬಿಟ್ಟರು.

---

## ೧೨ನೇ ಪ್ರಕರಣ.

## ಇಂಗ್ಲಿಷರ ಸುರಾಜ್ಯವು.

(೧೯ನೇ ಶತಮಾನದಿಂದ ಮುಂದೆ.)

ಇಂಗ್ಲಿಷರು ಪೇಶವೆಯ ರಾಜ್ಯವನ್ನು ತಕ್ಕೊಂಡು, ಸಾತಾರೆಯ ಅರಸು, ಮೈಸೂರ ಅರಸು, ನಿಜಾಮ, ಈ ಮೂವರನ್ನು ಮಾಂಡಲಿಕರನ್ನು ಮಾಡಿ

ಕೊಂಡ ಸುಮಾರಿಗೆ ಇಡೀ ಹಿಂದುಸ್ತಾನದ ಒಡೆತನವನ್ನು ಸಂಪಾದಿಸಿದ್ದರು. ಇವರು ೧೭೭೪ರಲ್ಲಿ ಕಲಕತ್ತೆಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು, ಅಲ್ಲಿ ಗವರ್ನರ ಜನರಲ್ಲನೆಂಬ ಮುಖ್ಯಾಧಿಕಾರಿಯನ್ನು ನೇಮಿಸಿ, ತಮ್ಮ ರಾಜ್ಯದಲ್ಲಿ ಬಂಗಾಲ, ಮದ್ರಾಸ, ಮುಂಬಯಿ ಎಂಬ ಮೂರು ಇಲಾಖೆಗಳನ್ನು ಮಾಡಿದರು. ಇವರು ಮುಂದೆ ೫೦ ವರ್ಷಗಳ ವರೆಗೆ ಈ ದೊಡ್ಡ ರಾಜ್ಯದಲ್ಲಿ ವ್ಯವಸ್ಥೆಯನ್ನು ನೆಲೆಗೊಳಿಸುವದರಲ್ಲಿ ತೊಡಗಿದ್ದರು. ಇವರ ಹೊಸ ಅಮಲಿನಲ್ಲಿ ಜನರು ಸೌಖ್ಯವನ್ನು ತಿರುಗಿ ಕಾಣಹತ್ತಿದರು. ಆದರೆ ಅಲ್ಲಲ್ಲಿ ನೆಲೆಗೊಂಡಿದ್ದ ಹಳೇ ಅರಸರೂ ಸಣ್ಣಪುಟ್ಟ ಸಂಸ್ಥಾನಿಕರೂ ಇವರ ಬಲವನ್ನೂ ಹಿತಬುದ್ಧಿಯನ್ನೂ ಅರಿಯದೆ ಸ್ವತಂತ್ರರಾಗಲಿಕ್ಕೆ ಹವಣಿಸಿ ತಮ್ಮ ಸಣ್ಣಪುಟ್ಟ ಸೀಮೆಗಳನ್ನು ಕಳಕೊಂಡರು.

ಕಿತ್ತೂರ ಬಂಡಾಯ.

ಕಿತ್ತೂರ ದೇಸಾಯಿಯು ಇ. ಸ. ೧೮೨೪ರಲ್ಲಿ ತೀರಲಾಗಿ, ಅವನ ಕಾರಭಾರಿಯು ಒಬ್ಬ ಹುಡುಗನನ್ನು ದೇಸಾಯಿಯ ದತ್ತಪುತ್ರನನ್ನು ಮಾಡಿ, ಇಂಗ್ಲಿಷ ಸರಕಾರಕ್ಕೆ ಬರೆದನು. ಇದರ ವಿಚಾರವು ಸರಕಾರದಲ್ಲಿ ನಡೆದಿರಲಾಗಿ ಥ್ಯಾಕರೆ ಎಂಬ ದೊರೆಯು ದೇಸಾಯಿಯ ಖಜಾನೆಯ ವ್ಯವಸ್ಥೆಗಾಗಿ ಕಿತ್ತೂರಿಗೆ ಹೋದನು. ಆದರೆ ಸತ್ತ ದೇಸಾಯಿಯ ತಾಯಿ ಚನ್ನವ್ವನು ಅವನನ್ನು ಕೋಟೆಯೊಳಗೆ ಬಿಡದೆ ದಂಡು ಕೂಡಿಸಿದಳು. ಚನ್ನವ್ವನ ದಂಡಾಳುಗಳು ಅಗಸೆಯನ್ನು ಅಕಸ್ಮಾತ್ತಾಗಿ ಒಮ್ಮಿಂದೊಮ್ಮೆ ತೆಗೆದು ಹೊರಗೆ ಫಿರಂಗಿ ಹಚ್ಚಿಕೊಂಡು ಕೂತಿದ್ದ ಥ್ಯಾಕರೇ ಮುಂತಾದ ಕೆಲ ಸಾಹೇಬರನ್ನು ಕೊಂದರು. ಥ್ಯಾಕರೆ ದೊರೆಯ ಗೋರಿಯು ಧಾರವಾಡದಲ್ಲಿ ಇರುವದು. ಆ ಕಾರಣ ಸರಕಾರದವರು ಮತ್ತೊಂದು ದಂಡು ಕಳಿಸಿ, ಆ ಸಂಸ್ಥಾನವನ್ನು ನಿರ್ಮೂಲ ಮಾಡಿದರು. ಈ ಸಂಸ್ಥಾನವು ಮುಳುಗಿದ್ದರಿಂದ ಬಹುಜನರ ಇನಾಮುಗಳು ಕಳೆದುಹೋದವು. ಅವರಲ್ಲಿ ಒಬ್ಬನಾದ ರಾಯನಾಯಕನೆಂಬ ಸಂಗೊಳ್ಳಿಯ ಹಳಬನು ಕಿತ್ತೂರ ಸಂಸ್ಥಾನವನ್ನು ಮತ್ತೆ ಸ್ಥಾಪಿಸುವೆನೆಂದು ಹೇಳಿ ೧,೦೦೦ ಜನ ಹಳಬರನ್ನು ಕೂಡಿಸಿ, ಬಂಡಾಯಮಾಡಿದನು. ಅವನು ಸಂಪಗಾವಿ-ಬೀಡಿಗಳ ತಾಲೂಕ ಕಚೇರಿಗಳನ್ನು ಸುಟ್ಟು, ಸುತ್ತಲಿನ ಹಳ್ಳಿಗಳನ್ನು ಸುಲಿದನು. ಇವನ ಪುಂಡಾಟಗಳು ನಾಲ್ಕು ತಿಂಗಳು ಸಾಗಿದ ಬಳಿಕ, ಇಬ್ಬರು ಗೌಡರ ಸಹಾಯದಿಂದ ಸಂಪಗಾವಿಯ ಮಾಮಲೇದಾರನು ಇವ

ನನ್ನು ಹಿಡಿದನು. ಇಂಗ್ಲಿಷರು ಇವನನ್ನು **ನಂದಿಗಡದಲ್ಲಿ** ಗಲ್ಲಿಗೆ ಹಾಕಿದರು. ಕೆಲವರು ಮರುಳುಜನರು ಕೂಡಿ ಅವನ ಗೋರಿಯ ಮೇಲೆ ಒಂದು ಗುಡಿಯನ್ನು ಕಟ್ಟಿಸಿದ್ದಾರೆ.

ಅತ್ತ ಮೈಸೂರ ಸಂಸ್ಥಾನದಲ್ಲಿ ರಾಜ್ಯವಾಳುತ್ತಿದ್ದ **ಕೃಷ್ಣರಾಯನು** ದುಂದುಗಾರರ ಸಹವಾಸದಿಂದ ಹಣವನ್ನೆಲ್ಲ ಹಾಳುಮಾಡಿ ಸಾಲ ತೆಗೆಯ ಹತ್ತಿದನು. ಹಣದ ಬಗ್ಗೆ ಅವನಿಂದ ಪೀಡಿತರಾದ ಪ್ರಜೆಗಳು ದಾಳಿ ಎಬ್ಬಿಸಿದರು. ಆಗ ಇಂಗ್ಲಿಷ ಸರಕಾರದವರು ಮಧ್ಯಸ್ಥಿಕೆ ಮಾಡಿ, ಅವನಿಗೆ ಸ್ವಲ್ಪ ಹಣ ನೇಮಿಸಿಕೊಟ್ಟು ಒಬ್ಬ **ಕಮಿಶನರನ** ಮುಖಾಂತರವಾಗಿ ಕಾರಭಾರ ನಡಿಸಹತ್ತಿದರು (೧೮೩೨). ಮುಂದೆ ಎರಡು ವರ್ಷಗಳಲ್ಲಿ **ಕೊಡಗುನಾಡಿನ**

**ಮಾಂಡಲಿಕರ ಅವ್ಯವಸ್ಥೆ.**

ಅರಸನಿಗೆ ಸನ್ನಿ ಹಿಡಿದದ್ದರಿಂದ, ಅವನು ತನ್ನ ಮನೆತನಕ್ಕೆ ಹೊಂದಿದ ಯಾವತ್ತು ಜನರನ್ನೂ ಬಹುಜನ ಪ್ರಜೆಗಳನ್ನೂ ಕೊಲ್ಲಿಸಿ, ಇಂಗ್ಲಿಷರ ಮೇಲೆ ಶಸ್ತ್ರಹಿಡಿದನು. ಆ ಕಾರಣ ಇಂಗ್ಲಿಷರು ಅವನನ್ನು ಸೆರೆಯಲ್ಲಿಟ್ಟು ಅವನ ರಾಜ್ಯವನ್ನು ಮೈಸೂರ ಕಮಿಶನರನ ಕೈಯಲ್ಲಿ ಕೊಟ್ಟರು.

ಮುಂದೆ ಮಹಾರಾಷ್ಟ್ರದಲ್ಲಿ **ಸಾತಾರೆಯ ಅರಸು, ನಿಪ್ಪಾಣಿಕರ, ತಾಸಗಾವಿಯ** ಸಂಸ್ಥಾನಿಕ ಮೊದಲಾದವರು ಸಂತತಿಯಿಲ್ಲದೆ ತೀರಲು ಇಂಗ್ಲಿಷರು ಅವರ ರಾಜ್ಯಗಳನ್ನು ತಕ್ಕೊಂಡರು. ಇದರಿಂದ ಉಳಿದ ಸಂಸ್ಥಾನಿಕರ ಮನಸು ಕೆಟ್ಟದ್ದಲ್ಲದೆ, ಬಾಜೀರಾಯನ ದತ್ತಪುತ್ರನಾದ **ನಾನಾಸಾಹೇಬನೆಂಬವನು** ಮೋಸ ಮಾಡಿ ಸರಕಾರದವರ ದಂಡಿನೊಳಗಿನ ಸಿಪಾಯಿಗಳ ಮನಸು ಕೆಡಿಸಿದನು. ಅದರಿಂದ ಉತ್ತರ ಹಿಂದುಸ್ತಾನದಲ್ಲಿ ಇ. ಸ. ೧೮೫೭ರಲ್ಲಿ **"ಸಿಪಾಯಿಗಳ ಬಂಡು"** ಎಂದು ಹೆಸರಾದ ದೊಡ್ಡ ಬಂಡಾಯವಾಯಿತು. ಆಗ ಕರ್ನಾಟಕದೊಳಗೆ ಕೆಲವು ಸಣ್ಣ ದಾಳಿಗಳುಂಟಾದವು. ನಿಜಾಮನ ರಾಜ್ಯದೊಳಗೆ **ಸುರಪುರದ** ಬೇಡಜಾತಿಯ **ನಾಯಕನೆಂಬ** ಅರಸನೂ, **ನರಗುಂದದ** ಸಂಸ್ಥಾನಿಕನಾದ **ಬಾಬಾಸಾಹೇಬ ಭಾವೆಯೆಂಬ**ವನೂ, ಮುಂಡರಿಗೆಯ **ಭೀಮರಾಯನೂ** ಕೂಡಿ ಒಳಸಂಚುಮಾಡಿ, ದೊಡ್ಡ ಬಂಡಾಯ ಮಾಡಲಿಕ್ಕೆ ಯತ್ನಿಸಿದರು. ಆದರೆ ಇವರ ಕೋರಿಕೆಯು ಕೈಗೂಡಲಿಲ್ಲ. ಲಿಂಗಸೂರಿನಿಂದ ಸರಕಾರದ ದಂಡಿನವರು ಸುರಪುರಕ್ಕೆ ಹೋಗಿ ಅಲ್ಲಿಯ ನಾಯಕನನ್ನು ಸೆರೆ ಹಿಡಿದದರಿಂದ ಅವನು ವಿಷ ತಿಂದು ಸತ್ತನು. ನರ

ಗುಂದದ ಬಾಬಾಸಾಹೇಬನು ಅಸಿಸ್ಟಂಟ ಪೊಲಿಟಿಕಲ್ ಏಜಂಟನಾದ ವ್ಯಾನಸನ್ ದೊರೆಯನ್ನು ಮೋಸದಿಂದ ಕೊಂದು ನರಗುಂದದ ಕೋಟೆಯ ಮೇಲೆ ಯುದ್ಧಕ್ಕೆ ನಿಂತನು. ಸರಕಾರದ ದಂಡಿನವರು ಹೋಗಿ ಆ ಕೋಟೆಯನ್ನು ತಕ್ಕೊಳ್ಳಲಾಗಿ, ಬಾಬಾಸಾಹೇಬನು ಓಡಿ ಹೋಗಿ ಅಡಗಿಕೊಂಡಿರಲು, ತೊರಗಲ್ಲಿನ ಹತ್ತರ ಅಡವಿಯಲ್ಲಿ ಸಿಕ್ಕನು. ಇವನನ್ನು ಬೆಳಗಾವಿಯಲ್ಲಿ ಗಲ್ಲಿಗೆ ಏರಿಸಿದರು. ಮುಂಡರಿಗೆಯ ಭೀಮರಾಯನು ಕೊಪ್ಪಳದ ಕೋಟೆಯನ್ನು ಹಿಡಕೊಳ್ಳಲಾಗಿ, ಸರಕಾರದ ದಂಡಿನವರು ಅವನನ್ನು ಯುದ್ಧದಲ್ಲಿ ಕೊಂದು ಆ ಕೋಟೆಯನ್ನು ತಕ್ಕೊಂಡರು. ಬಳಿಕ ಕರ್ನಾಟಕದಲ್ಲಿ ಶಾಂತತೆಯುಂಟಾಯಿತು.

**೧೮೫೭ರ ದಾಳಿಗಳು.**

ಮೈಸೂರ ಕೃಷ್ಣರಾಜನು ಇ. ಸ. ೧೮೬೮ರಲ್ಲಿ ತೀರಿದ ಬಳಿಕ ಸರಕಾರದವರು ಅವನ ಸಂಸ್ಥಾನವನ್ನು ಮುರಿಯದೆ, ಚಾಮರಾಜನೆಂಬ ಬಾಲಕನನ್ನು ಮೈಸೂರ ಸಂಸ್ಥಾನದ ಒಡೆಯನೆಂದು ಗೊತ್ತುಮಾಡಿ, ಅವನಿಗೆ ಚೆನ್ನಾಗಿ ವಿದ್ಯೆ ಕಲಿಸಿದರು. ಇ. ಸ. ೧೮೮೧ರಲ್ಲಿ ಈತನು ಪ್ರಬುದ್ಧನಾದ ಬಳಿಕ ರಾಜ್ಯವು ಇವನಿಗೆ ಒಪ್ಪಿಸಲ್ಪಟ್ಟಿತು. ಚಾಮರಾಜನು ೧೩ ವರ್ಷ ಚನ್ನಾಗಿ ರಾಜ್ಯಪರಿಪಾಲನ ಮಾಡಿ ಸ್ತ್ರೀವಿದ್ಯಾಭ್ಯಾಸವನ್ನು ಬೆಳಿಸಿ, ಪ್ರಜಾಪ್ರತಿನಿಧಿಸಭೆಯನ್ನುಂಟು ಮಾಡಿ, ರೈತರಿಗೋಸ್ಕರ ವ್ಯವಸಾಯದ ಬ್ಯಾಂಕುಗಳನ್ನು ಏರ್ಪಡಿಸಿ, ಕಾಲುವೆಗಳನ್ನೂ ಕೆರೆಗಳನ್ನೂ ಕಡಿಸಿ ಅಕಾಲದಲ್ಲಿ ಕಲಕತ್ತೆಯಲ್ಲಿ ಮರಣಹೊಂದಿದನು. ಸದ್ಯಕ್ಕೆ ಮೈಸೂರ ಮಹಾರಾಜರಾಗಿರುವ ಕೃಷ್ಣ ರಾಜ ಒಡೆಯರಿಗೆ ಇ. ಸ. ೧೮೯೫ರಲ್ಲಿ ಪಟ್ಟಾಭಿಷೇಕವಾಯಿತು. ಆಗ ಇವರು ಸಣ್ಣವರಿದ್ದರು. ೧೯೦೨ರಲ್ಲಿ ಲಾರ್ಡ ಕರ್ಝನ್ ಎಂಬ ವ್ಹಾಯಿಸರಾಯರು ಸ್ವಂತವಾಗಿ ಮೈಸೂರಿಗೆ ಹೋಗಿ ಇವರಿಗೆ ರಾಜ್ಯಾಧಿಪತ್ಯವನ್ನು ಕೊಟ್ಟು ಬಂದರು. ಇವರ

**ಸದ್ಯದ ಮೈಸೂರು ಸಂಸ್ಥಾನ.**


ಲಾರ್ಡ ಕರ್ಝನ.



ವಿಕ್ಟೋರಿಯ ಮಹಾರಾಣಿಯವರು.

ಆಳಿಕೆಯಲ್ಲಿ ಪ್ರಜಾಪ್ರತಿನಿಧಿಸಭೆಯವರ ಅಧಿಕಾರಗಳು ಹೆಚ್ಚಿಸಲ್ಪಟ್ಟಿವೆ. ಮೈಸೂರು ಪ್ರಾಂತವು ವಿದ್ಯೆಕಲಾಕೌಶಲ್ಯಗಳ ಬಗ್ಗೆ ಹೆಸರಾಗುತ್ತ ನಡೆದಿದೆ. ಮೈಸೂರು ಸಂಸ್ಥಾನದಲ್ಲಿ ಸ್ವತಂತ್ರ ವಿಶ್ವವಿದ್ಯಾಲಯವು ಸ್ಥಾಪಿಸಲ್ಪಟ್ಟಿದೆ (೧೯೧೬). ಒಟ್ಟಿನ ಮೇಲೆ ಮೈಸೂರ ಸಂಸ್ಥಾನವು ಬ್ರಿಟಿಷರ ಹಿಂದುಸ್ತಾನದಲ್ಲಿರುವ ಮಾಂಡಲಿಕ ಸಂಸ್ಥಾನಗಳಲ್ಲಿ ಮಾದರಿಯ ಸಂಸ್ಥಾನವೆಂದು ಅನ್ನಿಸಿಗೊಳ್ಳಹತ್ತಿರುವದು. ನಿಜಾಮನ ರಾಜ್ಯದಲ್ಲಿಯೂ ಪ್ರಜೆಗಳು ಬಹು ಸುಖದಿಂದಿರುವರು. ಸದ್ಯದ ನಿಜಾಮನಾದ ಮೀರ ಉಸ್ಮಾನ ಅಲ್ಲೀ ಇವನು ಹೊಸಹೊಸ ಸುಧಾರಣೆಗಳನ್ನು ಕೈಕೊಳ್ಳುತ್ತಿರುವನು. ಮೈಸೂರಿನಂತೆಯೇ ಹೈದರಾಬಾದದಲ್ಲಿಯೂ ಒಂದು ಸ್ವತಂತ್ರ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಆಲೋಚನೆಯು ನಡೆದಿರುವದು.



ಇಂಡಿಯಾ ಚಕ್ರವರ್ತಿಯವರಾಗಿದ್ದ ಏಳನೆಯ ಎಡ್ವರ್ಡರು.

ಇಂಗ್ಲಿಷರು ೧೮೫೭ರಲ್ಲಾದ ಬಂಡಾಯವನ್ನು ಮುರಿದ ಬಳಿಕ, ವಿಕ್ಟೋರಿಯ ಮಹಾರಾಣಿಯವರು ಹಿಂದುಸ್ತಾನದ ರಾಜ್ಯಭಾರವನ್ನು ಈಸ್ಟ ಇಂಡಿಯ ಕಂಪನಿಯವರ ಕೈಯಿಂದ ತಪ್ಪಿಸಿ ತಾವು ವಹಿಸಿಕೊಂಡಂದಿನಿಂದ ಇಂದಿಗೆ

೬೦ ವರ್ಷಗಳಾದವು (೧೯೧೭). ಈ ಅವಧಿಯಲ್ಲಿ ವಿಕ್ಟೋರಿಯಾ ಚಕ್ರ ವರ್ತಿನಿಯವರು ತಮ್ಮ ಪ್ರಜೆಗಳನ್ನೆಲ್ಲ ತಾಯಿಯು ಮಕ್ಕಳನ್ನು ಜೋಪಾನ ಮಾಡುವಂತೆ ಪರಿಪಾಲನ ಮಾಡಿದರು. ಈ ಮೂಲಕ ಇವರು ಇತಿಹಾಸ ದಲ್ಲಿ ಒಳ್ಳೇ ವಿಕ್ಟೋರಿಯಾ ಎಂದು ಹೆಸರಾಗಿರುವರು. ಇವರ ತರುವಾಯ ಇವರ ಮಕ್ಕಳಾದ ಏಳನೇ ಎಡ್ವರ್ಡ ಬಾದಶಹರು ಬಹು ಶಾಂತತೆಯಿಂದ ಇ. ಸ. ೧೯೧೦ರ ವರೆಗೆ ಆಳಿದರು. ಸದ್ಯಕ್ಕೆ ಇವರ ಮರುಚಲ ಮಕ್ಕಳಾದ ಪಂಚಮ ಜಾರ್ಜ ಪ್ರಭುಗಳು ಚಕ್ರವರ್ತಿಗಳಾಗಿ ನಮ್ಮನ್ನು ಆಳುತ್ತಿರುವರು. ಈ ನೂರವರ ಆಳಿಕೆಯಲ್ಲಿಯೂ ಈ ನಾಡಿನಲ್ಲಿ ಒಂದೇ ಸಮನಾಗಿ ಶಾಂತ ತೆಯು ಹಬ್ಬಿರುವದಲ್ಲದೆ ಸುಧಾರಣೆಯೂ ಆಗಹತ್ತಿರುವದು.

**ಬ್ರಿಟಿಷರ ಆಡಳಿತದ ಲಾಭಗಳು.**

ಬ್ರಿಟಿಷರ ಆಳಿಕೆಯಲ್ಲಿ ಎಲ್ಲ ಧರ್ಮದ ಜನರು ತಮ್ಮ ತಮ್ಮ ಧರ್ಮದಂತೆ ನಡೆಯಬಹುದಾಗಿದೆ. ಎಲ್ಲ ವರ್ಗಗಳ ಜನರಿಗೆ ಒಂದೇ ಬಗೆಯ ಹಕ್ಕುಗಳಿರು ವವು. ಕಾಯಿದೆಯಿಂದ ಎಲ್ಲರೂ ಸಮರೆಂದೆಣಿಸಲ್ಪಡು ವರು. ನಾಡಿನಲ್ಲೆಲ್ಲ ಶಾಂತತೆಯು ಅಖಂಡವಾಗಿ ನೆಲೆ ಗೊಂಡದ್ದರಿಂದ ಜನರ ಜೀವವೂ ಹಣವೂ ಸುರಕ್ಷಿತವಾಗಿರು ವವು. ಇದಲ್ಲದೆ ಸರಕಾರದವರು ಪ್ರಜೆಗಳ ಹಿತಕ್ಕಾಗಿ ಎಷ್ಟೋ ಕೆಲಸಗಳನ್ನು ಮಾಡುತ್ತಿರುವರು. ಊರೂರಿಗೆ ದೇಶಭಾಷೆಯನ್ನು ಕಲಿಸುವ ಶಾಲೆಗಳನ್ನೂ ದೊಡ್ಡ ಊರುಗಳಲ್ಲಿ ಇಂಗ್ಲಿಷ ಭಾಷೆಯನ್ನು ಕಲಿ ಸುವ ಶಾಲೆಗಳನ್ನೂ ಹಾಕಿದ್ದಾರೆ; ಇಲ್ಲವೆ ಇಂಥ ಶಾಲೆಗಳಿಗೆ ದ್ರವ್ಯಸಹಾಯ ಮಾಡುತ್ತಾರೆ. ಮೇಲಾದ ರೇಲ್ ಮಾರ್ಗಗಳನ್ನೂ ಲೈನ ದಾರಿಗಳನ್ನೂ ಹಾಕಿಸಿ ವ್ಯಾಪಾರವನ್ನು ಬಹಳ ಬೆಳಿಸಿದ್ದಾರೆ; ಬರಗಳ ಹಾವಳಿಯನ್ನು ತಪ್ಪಿಸಿದ್ದಾರೆ. ಜೇಸಾಯದ ಫಾರ್ಮ (ಪ್ರಯೋಗಕ್ಷೇತ್ರ)ಗಳನ್ನು ಅಲ್ಲಲ್ಲಿ ಏರ್ಪ ಡಿಸಿ, ಒಕ್ಕಲಿಗರಿಗೆ ಉಪಯೋಗ ಬೀಳುವಂಥ ಮಹತ್ವದ ಮಾಹಿತಿಯನ್ನು ಕೂಡ ಹಾಕುವ ವ್ಯವಸ್ಥೆಯನ್ನು ಮಾಡಿದ್ದಾರೆ. ಒಕ್ಕಲಿಗರ ಮಕ್ಕಳಿಗೆ ಒಕ್ಕಲತನದ ಹೋರೆಯನ್ನು ಕಲಿಸಲಿಕ್ಕೆಂದು ಸ್ವತಂತ್ರ ಶಾಲೆಗಳನ್ನು ಹಾಕಿದ್ದಾರೆ. ಒಳ್ಳೇ ಮಾದರಿಯ ಹತ್ತಿ ಮೊದಲಾದ ಬೆಳೆಗಳನ್ನು ಬಿತ್ತಿ ಬೇಕಾದಷ್ಟು ಲಾಭ ಮಾಡಿಕೊಳ್ಳಲಿಕ್ಕೆ ಒಕ್ಕಲಿಗರಿಗೆ ಉತ್ತೇಜನ ಕೊಡುತ್ತಾರೆ. ಒಕ್ಕಲಿಗರಿಗೆ ತೀರ ಸ್ವಲ್ಪ ಬಡ್ಡಿಯಿಂದ ಇಲ್ಲವೆ ಒಮ್ಮೊಮ್ಮೆ ಏನೂ ಬಡ್ಡಿ ತೆಗೆದುಕೊಳ್ಳದೆ ಸಾಲಕೊಟ್ಟು ಸಹಾಯಮಾಡುತ್ತಾರೆ. ಪ್ರಜೆಗಳಲ್ಲಿ ಅಳತೆಯೊಳಗೆ ಖರ್ಚು

ಮಾಡುವ ಚಟವು ನೆಲೆಗೊಳ್ಳಬೇಕೆಂದು ಸೇವಿಂಗ್ಸ ಬ್ಯಾಂಕ ಅಂದರೆ ಉಳಿತಾಯವನ್ನು ಬಡ್ಡಿಗೆ ಹಚ್ಚಿ ಇಡುವ ವ್ಯವಸ್ಥೆ ಮಾಡಿದ್ದಾರೆ. ರೈತರೇ ಮೊದಲಾದವರು ಒಟ್ಟುಗೂಡಿ ಸಹಕಾರಿತತ್ವದ ಮೇಲೆ ಬ್ಯಾಂಕುಗಳನ್ನು ಸ್ಥಾಪಿಸಲಿಕ್ಕೆ ಉತ್ತೇಜನ ಕೊಟ್ಟಿದ್ದಾರೆ. ಅರಣ್ಯಗಳ ಹುಟ್ಟುವಳಿಯನ್ನು ವ್ಯವಸ್ಥೆಗೊಳಿಸಿ ಸಾರ್ವಜನಿಕ ಉತ್ಪನ್ನವನ್ನು ಬೆಳಿಸಿದ್ದಾರೆ. ಪ್ರಜೆಗಳ ವಿತ್ತ ಜೀವಿತಗಳ ರಕ್ಷಣೆಗಾಗಿ ಪೋಲೀಸರನ್ನೂ ನ್ಯಾಯಸಭೆಗಳನ್ನೂ ಏರ್ಪಡಿಸಿದ್ದಾರೆ. ದೊಡ್ಡ ಊರುಗಳಲ್ಲಿ ಆಸ್ಪತ್ರಿಗಳನ್ನು ಕಟ್ಟಿಸಿ ಪ್ರಜರಿಗೆ ಔಷಧೋಪಚಾರ ನಡೆಯುವ ವ್ಯವಸ್ಥೆಯನ್ನು ಮಾಡಿದ್ದಾರೆ. ಇದಲ್ಲದೆ, ಆಯಾ ಭಾಗದ ಆರೋಗ್ಯರಕ್ಷಣದ ಪ್ರಶ್ನೆಗಳನ್ನು ಕುರಿತು ವಿಚಾರ ಮಾಡಲಿಕ್ಕೆ ಅಧಿಕಾರಸ್ಥರನ್ನು ನೇಮಿಸಿದ್ದಾರೆ. ಈ ನಾಡಿನಲ್ಲಿ ಚಳಿಜ್ವರ ಬಹಳ. ಆಸ್ಪತ್ರಿಗಳು ಇಲ್ಲದ ಸಣ್ಣ ಊರುಗಳ ಜನರಿಗೂ ಈ ಜ್ವರಕ್ಕೆ ಔಷಧವಾದ ಕ್ವಿನಿನವೆಂಬ ಪುಡಿಯು ದೊರೆಯಲೆಂದು, ಸರಕಾರದವರು ಪೋಸ್ಟ ಆಫೀಸುಗಳಲ್ಲಿ ಇದರ ಪುಡಿಕೆಗಳನ್ನಿಟ್ಟು, ಅವುಗಳನ್ನು ಜನರಿಗೆ ಅಗ್ಗವಾಗಿ ಮಾರುತ್ತಾರೆ. ಮೈಲಿಯ ಜೇನೆಯು ಹಬ್ಬ ಬಾರದೆಂದು ಮೈಲಿ ತೆಗೆಯುವ ಉದ್ಯೋಗಸ್ಥರನ್ನು ಅಲ್ಲಲ್ಲಿ ನೇಮಿಸಿದ್ದಾರೆ. ಮ್ಯುನಿಸಿಪಾಲಿಟಿ, ಲೋಕಲ್ ಬೋರ್ಡ ಮೊದಲಾದ ಸಂಘಗಳನ್ನು ಸ್ಥಾಪಿಸಿ, ಪ್ರಜರಿಗೆ ತಮ್ಮ ತಮ್ಮ ಸ್ಥಾನಿಕ ಪ್ರಶ್ನೆಗಳ ವ್ಯವಸ್ಥೆಯನ್ನು ಮಾಡಿಕೊಳ್ಳುವ ಅಧಿಕಾರವನ್ನು ಕೊಟ್ಟಿರುತ್ತಾರೆ. ಈ ಮೇರೆಗೆ ಪ್ರಜೆಗಳಿಗೆ ರಾಜ್ಯ ವ್ಯವಸ್ಥೆಯ ಕೆಲಸದಲ್ಲಿ ಶಿಕ್ಷಣ ಹೊಂದಲಿಕ್ಕೆ ಅನುವು ಮಾಡಿದ್ದಾರೆ. ಇದಲ್ಲದೆ, ಸರಕಾರದ ದೊಡ್ಡ ಉದ್ಯೋಗಗಳಲ್ಲಿ ನಮ್ಮ ಜನರನ್ನು ಸೇರಿಸಿಕೊಂಡು ಪ್ರಜೆಗಳ ಸಹಾಯದಿಂದಲೂ ಸಮ್ಮತಿಯಿಂದಲೂ ಆಳಹತ್ತಿದ್ದಾರೆ. ಇ. ಸ. ೧೯೦೫ರಲ್ಲಿ ಜಾರ್ಜ ಪ್ರಭುಗಳು ಯುವರಾಜರಿದ್ದಾಗ ನಮ್ಮ ದೇಶಕ್ಕೆ ಬಂದು, ಅನೇಕ ಪ್ರಾಂತಗಳಲ್ಲಿ ಪ್ರವಾಸ ಮಾಡಿ, ಎಲ್ಲ ಧರ್ಮದ ಎಲ್ಲ ವರ್ಗದ ಜನರಿಗೆ ತಮ್ಮ ದರ್ಶನವನ್ನು ಕೊಟ್ಟು ಅವರ ಸ್ಥಿತಿಗತಿಗಳನ್ನು ಆಸ್ಥೆಯಿಂದ ಅರಿತುಕೊಂಡರು. ಬಾದಶಹರಾದ ಬಳಿಕ ಇ. ಸ. ೧೯೧೧ರಲ್ಲಿ ಇವರು ಮತ್ತೆ ಹಿಂದುಸ್ತಾನಕ್ಕೆ ಬಂದು, ದಿಲ್ಲಿಯಲ್ಲಿ ಬಹು ವೈಭವವುಳ್ಳ ದರಬಾರನ್ನು ನೆರೆಯಿಸಿ, ತಾವು ಪಟ್ಟವೇರಿದ ಸಂಗತಿಯನ್ನು ತಮ್ಮ ಪ್ರಜೆಗಳಾದ ನಮಗೆ ಅರುಹಿದರು. ಹಿಂದುಸ್ತಾನದ ಸಾರ್ವಭೌಮರಾದ ಬ್ರಿಟಿಷರಾಜರಲ್ಲಿ ಈ ದೇಶಕ್ಕೆ ತಾವೇ ದಯಮಾಡಿಸಿ ತಮ್ಮ ಪ್ರಜೆಗಳಿಗೆ ಭೆಟ್ಟಿಯನ್ನು ಕೊಟ್ಟು



ಜಾರ್ಜ ಬಾದಶಹರು.

ಸಂತೋಷಗೊಳಿಸಿದವರು ಇವರೇ ಮೊದಲನೆಯವರು. ಅಂದಿನಿಂದಂತೂ ಈ ದೇಶದಲ್ಲಿ ವಿದ್ಯೆ, ಒಕ್ಕಲತನ, ಕಲಾಕೌಶಲ್ಯ, ವ್ಯಾಪಾರ, ರಾಜ್ಯವ್ಯವಸ್ಥೆ, ಇವು ಗಳಲ್ಲಿ ಸುಧಾರಣೆಯು ಬಹಳ ಒತ್ತರದಿಂದ ನಡೆದಿರುವದು. ಕಳೆದ ಮೂರು

ವರ್ಷಗಳಿಂದ ಯುರೋಪದಲ್ಲಿ ಜರ್ಮನರು ದೊಡ್ಡ ಯುದ್ಧ ಹೂಡಿ ಬ್ರಿಟಿಷ ರನ್ನು ಕೆಣಕಿರುವರು. ಈ ಕಾಲದಲ್ಲಿಯೂ ನಮ್ಮ ನಾಡಿನಲ್ಲಿ ಸರಕಾರದವರು ಸುಧಾರಣೆಯ ಕೆಲಸಗಳನ್ನು ಹಿಂದಕ್ಕೆ ಹಾಕಿಲ್ಲ. ಇದೇ ವರುಷ (೧೯೧೭) ಸರಕಾರದವರು ಮುಂಬಯಿಕರ್ನಾಟಕದ ನಡುವಿನ ಪಟ್ಟಣವಾದ ಧಾರವಾಡದಲ್ಲಿ ಒಂದು ಇಂಗ್ಲಿಷ ಕಾಲೇಜವನ್ನು ಸ್ಥಾಪಿಸಿರುವರು. ಈ ಮೂಲಕ ಕರ್ನಾಟಕವು ತೀವ್ರವಾಗಿ ಸುಧಾರಣೆಯನ್ನು ಹೊಂದುವದೆನ್ನಲು ಸಂದೇಹವಿಲ್ಲ. ಆದದರಿಂದ ನಮ್ಮ ಒಡೆಯರಾದ ಪಂಚಮ ಜಾರ್ಜ ಪ್ರಭುಗಳಿಗೆ ಜಯವನ್ನೂ ಆಯುರಾರೋಗ್ಯಗಳನ್ನೂ ದಯಪಾಲಿಸಲೆಂದೂ ಬ್ರಿಟಿಷರಾಜ್ಯವು ಚಿರಕಾಲವಿರಲೆಂದೂ ಕನ್ನಡಿಗರಾದ ನಾವು ದಿನಾಲು ದೇವರನ್ನು ಕುರಿತು ಪ್ರಾರ್ಥಿಸತಕ್ಕದ್ದು.



# ವಂಶಾವಳಿಗಳು.

ಇಲ್ಲಿ ಕೊಟ್ಟ ಮೊದಲಿನ ಎಂಟು ವಂಶಾವಳಿಗಳ ಬಗ್ಗೆ ಯಾವತ್ತು ಪೂರ್ಣ ಮಾಹಿತಿಯು ಇನ್ನೂ ದೊರೆತಿಲ್ಲ. ಶಿಲಾಲೇಖಗಳಿಂದ ಸದ್ಯಕ್ಕೆ ದೊರೆತಿರುವ ವರ್ಷಗಳನ್ನೂ ಹೆಸರುಗಳನ್ನೂ ಮಾತ್ರ ಇಲ್ಲಿ ಬರೆದಿರುವೆವು.

## ೧. ಚಾಲುಕ್ಯರ ವಂಶಾವಳಿ.

| ಅರಸರು. | ಆಳಿಕೆಯ ವರ್ಷಗಳು ಕ್ರಿಸ್ತಶಕದ ಪ್ರಕಾರ. |
|---|---|
| ಜಯಸಿಂಹ | |
| ರಾಜಸಿಂಹ | |
| ೧ನೇ ಪುಲಿಕೇಶಿ | ೫೫೦ — ೫೬೭ |
| ೧ನೇ ಕೀರ್ತಿವರ್ಮ | ೫೬೭ — ೫೯೧ |
| ಮಂಗಲೇಶ | ೫೯೧ — ೬೧೦ |
| ೨ನೇ ಪುಲಿಕೇಶಿ | ೬೧೦ — ೬೪೨ |
| ೧ನೇ ವಿಕ್ರಮಾದಿತ್ಯ | ೬೪೨ — ೬೭೯ |
| ವಿನಯಾದಿತ್ಯ. | ೬೮೦ — ೬೯೬ |
| ವಿಜಯಾದಿತ್ಯ | ೬೯೬ — ೭೩೩ |
| ೨ನೇ ವಿಕ್ರಮಾದಿತ್ಯ | ೭೩೩ — ೭೪೭ |
| ೨ನೇ ಕೀರ್ತಿವರ್ಮ | ೭೪೭ — ೭೫೭ |

## ೨. ಪಶ್ಚಿಮದ ಚಾಲುಕ್ಯರ ವಂಶಾವಳಿ.

| ಅರಸರು | ವರ್ಷಗಳು |
|---|---|
| ೧ನೇ ತೈಲ | ೯೭೩ — ೯೯೭ |
| ಸತ್ಯಾಶ್ರಯ | ೯೯೭—೧೦೦೮ |
| ೨ನೇ ವಿಕ್ರಮಾದಿತ್ಯ | ೧೦೦೮—೧೦೧೮ |
| ಜಯಸಿಂಹ, ೧ನೇ ಜಗದೇಕಮಲ್ಲ | ೧೦೧೮—೧೦೪೦ |
| ೧ನೇ ಸೋಮೇಶ್ವರ, ಆಹವಮಲ್ಲ | ೧೦೪೦—೧೦೬೯ |
| ೨ನೇ ಸೋಮೇಶ್ವರ, ಭುವನೈಕಮಲ್ಲ | ೧೦೬೯—೧೦೭೬ |

| ಅರಸರು. | ಆಳಿಕೆಯ ವರ್ಷಗಳು ಕ್ರಿಸ್ತಶಕದ ಪ್ರಕಾರ. |
|---|---|
| ೪ನೇ ವಿಕ್ರಮಾದಿತ್ಯ, ತ್ರಿಭುವನಮಲ್ಲ | ೧೦೭೬ — ೧೧೨೬ |
| ೩ನೇ ಸೋಮೇಶ್ವರ, ಭೂಲೋಕಮಲ್ಲ | ೧೧೨೬ — ೧೧೩೮ |
| ೨ನೇ ಜಗದೇಕಮಲ್ಲ | ೧೧೩೮ — ೧೧೫೦ |
| ೨ನೇ ತೈಲಪ-ತ್ರೈಲೋಕ್ಯಮಲ್ಲನೂರ್ಮಡಿ | ೧೧೫೦ — ೧೧೬೫ |
| ೪ನೇ ಸೋಮೇಶ್ವರ, ತ್ರಿಭುವನಮಲ್ಲ | ೧೧೬೫ — ೧೧೮೯ |

## ೩. ಚೋಳರ ವಂಶಾವಳಿ ಇ. ಸ. ೯೮೫ರಿಂದ ೧೧೩೫.

| | |
|---|---|
| ೧ನೇ ರಾಜರಾಜ | ೯೮೫ — ೧೦೧೩ |
| ರಾಜೇಂದ್ರ, ಗಂಗೈಕೊಂಡ ಚೋಳ | ೧೦೧೩ — ೧೦೪೨ |
| ರಾಜಾಧಿರಾಜ, ಜಯಂಗೊಂಡ ಚೋಳ | ೧೦೪೨ — ೧೦೫೨ |
| ರಾಜೇಂದ್ರ | ೧೦೫೨ — ೧೦೬೨ |
| ವೀರರಾಜೇಂದ್ರ | ೧೦೬೨ — ೧೦೭೦ |
| ರಾಜೇಂದ್ರ ಚೋಳ, ಕುಲೋತ್ತುಂಗ | ೧೦೭೦ — ೧೧೧೮ |
| ವಿಕ್ರಮ ಚೋಳ | ೧೧೧೮ — ೧೧೩೫ |

## ೪. ರಾಷ್ಟ್ರಕೂಟರ ವಂಶಾವಳಿ.

| | |
|---|---|
| ದಂತಿದುರ್ಗ | ೭೫೪ — ? |
| ೨ನೇ ಗೋವಿಂದ | ೭೭೯ — ? |
| ೩ನೇ ಗೋವಿಂದ | ೭೯೪ — ೮೧೪ |
| ಅಮೋಘವರ್ಷ, ನೃಪತುಂಗ | ೮೧೫ — ೮೭೭ |
| ೨ನೇ ಕೃಷ್ಣ | ೮೮೪ — ೯೧೩ |
| * * * * * * * * * | |
| ಕಕ್ಕಲ | ೯೭೨ — ೯೭೩ |

## ೫. ವಿಜಯನಗರದ ೧ನೇ ವಂಶಾವಳಿ — ಸಂಗಮ ವಂಶ.

| | |
|---|---|
| ೧ನೇ ಹರಿಹರರಾಯ | ೧೩೩೬ — ೧೩೫೪ |
| ೧ನೇ ಬುಕ್ಕರಾಯ | ೧೩೫೪ — ೧೩೭೭ |

| ಅರಸರು. | ಆಳಿಕೆಯ ವರ್ಷಗಳು ಕ್ರಿಸ್ತಶಕದ ಪ್ರಕಾರ. |
|---|---|
| ೨ನೇ ಹರಿಹರರಾಯ | ೧೩೭೭—೧೪೦೪ |
| ೨ನೇ ಬುಕ್ಕರಾಯ, ೧ನೇ ದೇವರಾಯ | ೧೪೦೪—೧೪೨೨ |
| ೧ನೇ ವಿಜಯರಾಯ | ೧೪೨೨—೧೪೨೩ |
| ೨ನೇ ದೇವರಾಯ | ೧೪೨೩—೧೪೪೬ |
| ಮಲ್ಲಿಕಾರ್ಜುನರಾಯ | ೧೪೪೬—೧೪೬೫ |
| ವಿರೂಪಾಕ್ಷರಾಯ | ೧೪೬೯—೧೪೭೮ |

### ೬. ವಿಜಯನಗರದ ೨ನೇ ವಂಶಾವಳಿ—ನರಸಿಂಗ ವಂಶ.

| | |
|---|---|
| ನರಸಿಂಹ | ೧೪೯೬—೧೫೦೩ |
| ವೀರನರಸಿಂಹ, ಭುಜಬಲರಾಯ | ೧೫೦೪—೧೫೦೯ |
| ಕೃಷ್ಣರಾಯ | ೧೫೦೯—೧೫೨೯ |
| ಅಚ್ಯುತರಾಯ | ೧೫೩೦—೧೫೪೨ |
| ವೆಂಕಟದೇವರಾಯ | ೧೫೪೨ |
| ಸದಾಶಿವರಾಯ (ಹೆಸರಿಗೆ ಅರಸ) | ೧೫೪೩—೧೫೬೭ |

### ೭. ವಿಜಯನಗರದ ೩ನೇ ವಂಶಾವಳಿ—ಕರ್ನಾಟ ವಂಶ.

| | |
|---|---|
| ರಾಮರಾಜ | ೧೫೪೩—೧೫೬೭ |
| ತಿರುಮಲರಾಯ | ೧೫೬೭—೧೫೭೧ |
| ೧ನೇ ಶ್ರೀರಂಗರಾಯ | ೧೫೭೩—೧೫೮೪ |
| ೧ನೇ ವೆಂಕಟಪತಿರಾಯ | ೧೫೮೬—೧೬೧೫ |
| ರಾಮದೇವ | ೧೬೧೫—೧೬೨೫ |
| ೨ನೇ ವೆಂಕಟಪತಿರಾಯ | ೧೬೨೬—೧೬೪೦ |
| ೨ನೇ ಶ್ರೀರಂಗರಾಯ | ೧೬೪೩—೧೬೬೪ |

### ೮. ಹೊಯ್ಸಾಳರ ವಂಶಾವಳಿ.

| | |
|---|---|
| ಸಾಲ, ಹೊಯ್ಸಾಲ | ೧೦೦೬ |
| ಕಾಮ ಹೊಯ್ಸಾಲ | ೧೦೨೨—೧೦೨೭ |

| ಅರಸರು. | ಆಳಿಕೆಯ ವರ್ಷಗಳು ಕ್ರಿಸ್ತಶಕದ ಪ್ರಕಾರ. |
|---|---|
| ವಿನಯಾದಿತ್ಯ | ೧೦೪೭ — ೧೧೦೦ |
| ೧ನೇ ಬಲ್ಲಾಳ | ೧೧೦೦ — ೧೧೦೬ |
| ಬಿಟ್ಟಿದೇವ, ವಿಷ್ಣುವರ್ಧನ | ೧೧೧೧ — ೧೧೪೧ |
| ೧ನೇ ನರಸಿಂಹ | ೧೧೪೧ — ೧೧೭೩ |
| ೨ನೇ ಬಲ್ಲಾಳ, ವೀರಬಲ್ಲಾಳ | ೧೧೭೩ — ೧೨೨೦ |
| ೨ನೇ ನರಸಿಂಹ | ೧೨೨೦ — ೧೨೩೫ |
| ಸೋಮೇಶ್ವರ. | ೧೨೩೫ — ೧೨೫೪ |
| ೩ನೇ ನರಸಿಂಹ | ೧೨೫೪ — ೧೨೯೧ |
| ೩ನೇ ಬಲ್ಲಾಳ | ೧೨೯೧ — ೧೩೪೨ |
| ೪ನೇ ಬಲ್ಲಾಳ | ೧೩೪೩ |

## ೯. ಬಾಮನೀ ಬಾದಶಹರ ವಂಶಾವಳಿ.

| ಅರಸರು | ಆಳಿಕೆಯ ಆರಂಭ. ಕ್ರಿಸ್ತಶಕ. |
|---|---|
| ಅಲ್ಲಾಉದ್ದೀನ ಹಸನ ಗಂಗೂ ಬಾಮನಿ | ೧೩೪೭ |
| ಮಹಮ್ಮದಶಹ | ೧೩೫೮ |
| ಮುಜಾಹಿದಶಹ | ೧೩೭೫ |
| ದಾವುದಶಹ | ೧೩೭೮ |
| ಮಹಮೂದಶಹ | ೧೩೭೮ |
| ಗ್ಯಾಸುದ್ದೀನ | ೧೩೯೭ |
| ಶಮಸುದ್ದೀನ | ೧೩೯೭ |
| ಫಿರೋಜಶಹ. | ೧೩೯೭ |
| ಅಹಮ್ಮದಶಹ | ೧೪೨೨ |
| ೨ನೇ ಅಲ್ಲಾಉದ್ದೀನ | ೧೪೩೫ |
| ಹುಮಾಯೂನಶಹ (ಜಾಲೀಮ) | ೧೪೫೭ |
| ನಿಜಾಮಶಹ. | ೧೪೬೧ |
| ೩ನೇ ಮಹಮ್ಮದಶಹ | ೧೪೬೩ |
| ೪ನೇ ಮಹಮೂದಶಹ | ೧೪೮೨ |

| ಅರಸರು. | ಆಳಿಕೆಯ ಆರಂಭ. ಕ್ರಿಸ್ತಶಕ. |
|---|---|
| ೨ನೇ ಅಹಮ್ಮದಶಹ | ೧೫೧೮ |

(ಮುಂದಿನ ೮ ವರ್ಷಗಳಲ್ಲಿ ೩ ಮಂದಿ ಹೆಸರಿಗೆ ಮಾತ್ರ ಬಾದಶಹರಾದರು.)

## ೧೦. ಆದಿಲಶಾಹೀ ಬಾದಶಹರ ವಂಶಾವಳಿ (ವಿಜಾಪುರ).

| | |
|---|---|
| ಯುಸಫ ಆದಿಲಶಹ | ೧೪೮೯ |
| ಇಸ್ಮಾಯಿಲ ಆದಿಲಶಹ | ೧೫೧೦ |
| ಮಲ್ಲೂ ಆದಿಲಶಹ | ೧೫೩೪ |
| ಇಬ್ರಾಹಿಮ ಆದಿಲಶಹ | ೧೫೩೫ |
| ಅಲ್ಲೀ ಆದಿಲಶಹ | ೧೫೫೭ |
| ೨ನೇ ಇಬ್ರಾಹಿಮ ಆದಿಲಶಹ | ೧೫೮೦ |
| ಮಹಮ್ಮದ ಆದಿಲಶಹ | ೧೬೨೬ |
| ೨ನೇ ಅಲ್ಲೀ ಆದಿಲಶಹ | ೧೬೫೬ |
| ಶಿಕಂದರಶಹ | ೧೬೫೯ |
| ಸಮಾಪ್ತಿ | ೧೬೮೯ |

## ೧೧. ಮೈಸೂರ ಅರಸರ ವಂಶಾವಳಿ.

| | |
|---|---|
| ಆರುಬೆರಳಿನ ಚಾಮರಾಜ | ೧೫೦೭ |
| ಬೆಟ್ಟದ ಚಾಮರಾಜ | ೧೫೨೪ |
| ಬಟ್ಟದಲೆಯ ಚಾಮರಾಜ | |
| ತಿಮ್ಮರಾಜ | ೧೫೪೮ |
| ಹಿರಿಚಾಮರಾಜ | ೧೫೭೦ |
| ಬೆಟ್ಟದ ಒಡೆಯರು | ೧೫೭೬ |
| ರಾಜ ಒಡೆಯರು | ೧೫೯೨ |
| ೫ನೇ ಚಾಮರಾಜ | ೧೬೧೭ |
| ಇಮ್ಮಡಿರಾಜ | ೧೬೩೮ |
| ಕಂಠೀರವ ನರಸರಾಜ | ೧೬೪೦ |
| ದೊಡ್ಡ ದೇವರಾಜ | ೧೬೫೯ |
| ಚಿಕ್ಕ ದೇವರಾಜ | ೧೬೭೨ |

| ಅರಸರು. | ಆಳಿಕೆಯ ಆರಂಭ. ಕ್ರಿಸ್ತಶಕ. |
|---|---|
| ಕಂಠೀರವರಾಜ (ಮೂಕರಸು) | ೧೭೦೪ |
| ದೊಡ್ಡ ಕೃಷ್ಣರಾಜ | ೧೭೧೪ |
| ೬ನೇ ಚಾಮರಾಜ | ೧೭೩೧ |
| ಚಿಕ್ಕ ಕೃಷ್ಣರಾಜ | ೧೭೩೪ |
| ೭ನೇ ಚಾಮರಾಜ (ಹೈದರನಿಂದ ತಳ್ಳಲ್ಪಟ್ಟನು. ೧೭೬೦) | ೧೭೫೮ |
| (೮ನೇ ಚಾಮರಾಜನನ್ನು ಹೈದರನು ಹೆಸರಿಗೆ ಅರಸನನ್ನು ಮಾಡಿದ್ದನು.) | |
| (೧) ಹೈದರ ಅಲ್ಲೀ | ೧೭೬೧ |
| (೨) ಟೀಪೂ ಸುಲ್ತಾನ. | ೧೭೮೨ |
| ೩ನೇ ಕೃಷ್ಣರಾಜ ಒಡೆಯರು | ೧೭೯೯ |
| ೯ನೇ ಚಾಮರಾಜೇಂದ್ರ | ೧೮೬೮ |
| ೪ನೇ ಕೃಷ್ಣರಾಜ ಒಡೆಯರು | ೧೮೯೫ |

## ೧೨. ಮಹಾರಾಷ್ಟ್ರ ಅರಸರ ವಂಶಾವಳಿ.

ಶಿವಾಜಿ ಮಹಾರಾಜನ ವಂಶ (ರಾಯಗಡ)

| | |
|---|---|
| ಶಿವಾಜೀ ಮಹಾರಾಜ | ೧೬೬೪ |
| ಸಂಭಾಜಿ | ೧೬೮೦ |
| ರಾಜಾರಾಮ | ೧೬೯೦ |

## ೧೩. ಸಾತಾರೆಯ ಮನೆತನ.

| | |
|---|---|
| ಶಾಹೂ (ಸಂಭಾಜಿಯ ಮಗ) | ೧೭೦೮ |
| ರಾಮರಾಜ | ೧೭೪೮ |
| ೨ನೇ ಶಾಹೂ | ೧೭೭೭ |
| ಪ್ರತಾಪಸಿಂಹ | ೧೮೧೯ |
| ಅಪ್ಪಾಸಾಹೇಬ. (೧೮೪೮ರಲ್ಲಿ ತಳ್ಳಲ್ಪಟ್ಟನು) | ೧೮೩೯ |

## ೧೪. ಕೊಲ್ಲಾಪುರದ ಮನೆತನ.

| | |
|---|---|
| ಶಿವಾಜಿ (ರಾಜಾರಾಮನ ಮಗ) | ೧೭೦೮ |
| ಸಂಭಾಜಿ | ೧೭೨೯ |

| ಅರಸರು. | ಆಳಿಕೆಯ ಆರಂಭ. ಕ್ರಿಸ್ತಶಕ. |
|---|---|
| ೨ನೇ ಶಿವಾಜಿ | ೧೭೬೦ |
| ಆಬಾಸಾಹೇಬ | ೧೮೧೨ |
| ಬುವಾಸಾಹೇಬ | ೧೮೨೨ |
| ೩ನೇ ಶಿವಾಜಿ (ಬಾಬಾಸಾಹೇಬ) | ೧೮೩೭ |

## ೧೫. ಪೇಶವೇಯರ ವಂಶಾವಳಿ (ಪುಣೆ).

| | |
|---|---|
| ಬಾಳಾಜೀ ವಿಶ್ವನಾಥ | ೧೭೧೪ |
| ಹಿರೀ ಬಾಜೀರಾವ | ೧೭೨೧ |
| ಬಾಳಾಜೀ ಬಾಜೀರಾವ (ನಾನಾಸಾಹೇಬ) | ೧೭೪೦ |
| ಹಿರೀ ಮಾಧವರಾವ | ೧೭೬೧ |
| ನಾರಾಯಣರಾವ | ೧೭೭೩ |
| ಸವಾಯಿ ಮಾಧವರಾವ | ೧೭೭೩ |
| ೨ನೇ ಬಾಜೀರಾವ (ಇ. ಸ. ೧೮೧೮ರಲ್ಲಿ ಓಡಿಹೋದನು.) | ೧೭೯೫ |

## ೧೬. ನಿಜಾಮನ ವಂಶಾವಳಿ (ಹೈದರಾಬಾದ)

| | |
|---|---|
| ನಿಜಾಮ ಉಲ್ಮುಲ್ಕ | ೧೭೧೩ |
| ನಾಸೀರ್ಜಂಗ | ೧೭೪೮ |
| ಫಾರುಖೀ ಉದ್ದೀನ | ೧೭೫೦ |
| ಸಲಾಬತಜಂಗ | ೧೭೫೨ |
| ನಿಜಾಮ ಅಲ್ಲಿ | ೧೭೬೧ |
| ಮಿರ್ಜಾಸಿಕಂದರಜಾತ | ೧೮೦೩ |
| ನಾಝಿರ ಉದ್ದೌಲತ | ೧೮೨೮ |
| ಆಫಸುಲ ಉದ್ದೌಲತ | ೧೮೫೭ |
| ಮೀರ ಮುಹಬೂಬ ಅಲ್ಲಿ | ೧೮೬೯ |
| ಮೀರ ಉಸ್ಮಾನ ಅಲ್ಲಿ | ೧೯೧೧ |



### ಮಂಗಳೂರು

# ಬಾಸೆಲ್ ಮಿಶ್ಯನ್ ಪ್ರೆಸ್ ಮತ್ತು ಬುಕ್ ಡಿಪೊ

ಇವರು ಪ್ರಚುರಪಡಿಸುವ

## ಮುಂಬಯಿ ಇಲಾಖೆಯೊಳಗಿನ ಸರಕಾರಿ ಪುಸ್ತಕಗಳ ಪಟ್ಟಿ.

---

### ಕನ್ನಡ.

| | ರೂ. | ಆ. | ಪೈ |
|---|---|---|---|
| ಛಂದಸ್ಸಾರ | 0 | 4 | 0 |
| ಸಂಸ್ಕೃತ ಕನ್ನಡ ಶಬ್ದವ್ಯುತ್ಪತ್ತಿ | 0 | 6 | 0 |
| ಕೋಲಿನ್ಸೊಯವರ ಲೆಕ್ಕಪುಸ್ತಕ, 1ನೇ ಭಾಗ | 0 | 10 | 0 |
| " " 2ನೇ " | 0 | 9 | 6 |
| ರೇಖಾಗಣಿತ, 1ನೇ ಪುಸ್ತಕ | 0 | 4 | 0 |
| " 1ರಿಂದ 6 ಪುಸ್ತಕಗಳು | 1 | 12 | 0 |
| ಕ್ಷೇತ್ರಘನಫಲ | 0 | 3 | 0 |
| ಆರೋಗ್ಯವಿದ್ಯ | 0 | 2 | 9 |
| ಪ್ರಾಕೃತಿಕ ಭೂಗೋಲಶಾಸ್ತ್ರ | 0 | 8 | 0 |
| ವಸ್ತುಸಾರಗಳು | 0 | 3 | 0 |
| ಬೀಜಗಣಿತ | 1 | 6 | 0 |
| ಪದಾರ್ಥವಿಜ್ಞಾನಶಾಸ್ತ್ರದ ಮೂಲ ತತ್ವಗಳು | 0 | 9 | 0 |
| ಪದಾರ್ಥವಿಜ್ಞಾನಶಾಸ್ತ್ರ | 0 | 12 | 6 |
| ಬಾಯಿಲೆಕ್ಕದ ಪುಸ್ತಕ | 0 | 2 | 0 |
| ಭೂಮಿತಿ, ೧ನೇ ಭಾಗ | 0 | 8 | 9 |
| ಭೂಮಿತಿ, ೨ನೇ ಭಾಗ | 0 | 14 | 0 |
| ತಿದ್ದುವಿಕೆಯೂ ಶಿಕ್ಷಣವೂ | 0 | 14 | 0 |
| ಬೆಳಗಾವ ಜಿಲ್ಹೆಯ ವರ್ಣನೆಯು | 0 | 10 | 6 |
| ಕಾರವಾರ ಜಿಲ್ಹೆಯ ವರ್ಣನೆಯು | 0 | 11 | 3 |
| ವಿಜಾಪುರ ಜಿಲ್ಹೆಯ ಭೂಗೋಳವು | 0 | 10 | 6 |

### ಸಂಸ್ಕೃತ ಕನ್ನಡ.

| | ರೂ. | ಆ. | ಪೈ |
|---|---|---|---|
| ಮೊದಲನೇ ಪುಸ್ತಕ | 0 | 9 | 3 |
| ಎರಡನೇ " | 1 | 6 | 0 |